# ಗೋಕುಲ ನಿರ್ಗಮನ

ಪು. ತಿ. ನರಸಿಂಹಾಚಾರ್



ಪ್ರಕಾಶಕರು :
ಕಾವ್ಯಾಲಯ
ಮೈಸೂರು

ಕನ್ನಡ ಕಾವ್ಯಮಾಲೆ—೨೮

# ಗೋಕುಲ ನಿರ್ಗಮನ

(ಗೀತರೂಪಕ)

ಪು. ತಿ. ನರಸಿಂಹಾಚಾರ್



ಮೈಸೂರು:

ಕಾವ್ಯಾಲಯ

೧೯೪೫

ಪ್ರಿಯಮಿತ್ರ
ತೀ. ನಂ. ಶ್ರೀ ಗೆ

ಮುಡುಪಿದನು ಕೊಳ್ಳೆನ್ನ ಸರಸತಿಯ ಬಂಧು,
ನೆನೆಯದಿರು ನಮ್ಮೊಲವನಿಂತಳೆವೆನೆಂದು.
ನಿನ್ನ ನೇಹದೊಳೆನಗೆ ಎನಿತಾತ್ಮದೀಪ್ತಿ !
ಅದನಿಂತು ಭಾವಿಸಲು ಬಗೆಗಿನಿಸು ತೃಪ್ತಿ.

ತಾರಣ ಸಂವತ್ಸರ
ಮಾರ್ಗಶಿರ ಶುಕ್ಲ ಏಕಾದಶಿ

ಪ್ರಿಯ ಚಿದಂಬರಂ,

'ಗೋಕುಲ ನಿರ್ಗಮನ'ವನ್ನು ನಿಮಗೆ ಓದುವುದಕ್ಕೆ ತೆರೆದಾಗ ಈ ಕೃತಿಯ ಉದ್ದೇಶವೇನೆಂದು ನೀವು ಕೇಳಿದ ಜ್ಞಾಪಕ. ಆಗ ನಾನು ಒಂದು ತೆರದ ಉತ್ತರ ಕೊಟ್ಟಿರಬೇಕು. ಅದು ಅಷ್ಟು ಸಮರ್ಪಕವಾಗಿರಲಾರದು. ತಿರುಗಿ ನೀವು ಈ ಪ್ರಶ್ನೆ ಕೇಳಲಿಲ್ಲ. ಮಿಕ್ಕ ಮಿತ್ರರೂ ಈ ವಿಚಾರವನ್ನೆತ್ತಲಿಲ್ಲ. ಆದರೆ ಈ ಪ್ರಶ್ನೆ ನನ್ನನ್ನು ಇನ್ನೂ ಬಾಧಿಸುತ್ತಿದೆ. ಹಾಗೆಯೇ ಆಲೋಚಿಸಿ ನೋಡಿದರೆ ಮಮ್ಮಟನು ಹೇಳಿರುವ ಯಾವ ಕಾವ್ಯಪ್ರಯೋಜನವನ್ನಾದರೂ ಉದ್ದೇಶಿಸಿ ಈ ಕೃತಿ ನನ್ನಿಂದಾಗಿರಲಾರದು. ಪದ್ಯಕಾವ್ಯದಿಂದ ಈಗ ಯಶಸ್ಸನ್ನಪೇಕ್ಷಿಸೋಣವೇ, ಧನವನ್ನಪೇಕ್ಷಿಸೋಣವೇ? ಮನಸ್ಸು ಪ್ರಬಲವಾಗಿ 'ಆತ್ಮವದರಲ್ಲಿ ನಿಮಗ್ನ ವಾಗಿರುವ' ಈ ವಿಜ್ಞಾನಯುಗದಲ್ಲಿ ಯಾವ ದುರಿತಕ್ಷಯಕ್ಕಾಗಿ ಯಾವ ದೇವರನ್ನು ಸ್ತುತಿಸಬೇಕು? ಉಪದೇಶವು ಕಾವ್ಯಮಧುಲಿಪ್ತವಾದರೂ ಕಹಿಯೇ ಸರಿ. ಉಪದೇಶ ಈ ಕೃತಿಯ ಉದ್ದೇಶವಲ್ಲ. ಇನ್ನುಳಿದುದು ಪರನಿರ್ವೃತಿ—ಕಾವ್ಯದ ಪ್ರಯೋಜನ ಇದಿರಬಹುದು; ಪ್ರಚೋದಕವಾಗಿರಲಾರದು. ನೀವು ಗದ್ಯ ಬರೆ ಎನ್ನುತ್ತಿರುವಿರಿ. ನನ್ನಿಂದ ಪದ್ಯವೇ ಆಗುತ್ತಿರುತ್ತದೆ. ನನ್ನ ಸ್ವಭಾವ ದಲ್ಲಿಯೇ ಪದ್ಯ ಬರೆಯುವ ಚಟ ಬೆಳೆದುಬಂದಿರುವುದರಿಂದ ನಾನೊಬ್ಬ ಕವಿಯಿರ ಬಹುದು. ಆದುದರಿಂದ ಈ ಕಾವ್ಯ ನನ್ನಿಂದಾಯಿತು. "ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ" ಎಂಬ ಭಗವದ್ವಾಕ್ಯವನ್ನು ನಿಮ್ಮ ಅನುಭವಕ್ಕೆ ತರಬೇಕೆಂಬುದು ಈ ಕೃತಿಯ ಒಂದು ಉದ್ದೇಶವಾಗಿರಬೇಕು.

ಅಲ್ಲದೆ ನಾನು ಕೇಳಿದ ಹಲವಾರು ಸಂಗೀತಗಳ ಸುಖ, ನೋಡಿದ ನೃತ್ಯಾಭಿ ನಯಗಳ ಸೊಗಸು, ಮನನಮಾಡಿದ ಕಾವ್ಯಗಳ ರಸರುಚಿ, ಮತ್ತು ಇವುಗಳೆಲ್ಲದ ರಲ್ಲೂ ಪಟ್ಟ ಒಂದು ತೆರದ ಅತೃಪ್ತಿ, ಹಲವಾರು ಛಂದಸ್ಸುಗಳು ನನ್ನ ಮನವನ್ನು ತೂಗುಯ್ಯಾಲೆಯಾಡಿಸಿದ ಬಗೆ, ನನ್ನ ಹೃದಯಕ್ಕೆ ಅತಿ ಸಮೀಪವಾಗಿ ಸ್ನೇಹ ದಂತಿರುವ ಒಂದು ತೆರದ ಅಲೌಕಿಕ ವಿಷಾದ, ಅದರ ಸುತ್ತಿನ ಹಂಬಲುಗಳು, ಹೀಗೆ ನಾನು ಜಾಗ್ರತ್ಸ್ವಪ್ನಾವಸ್ಥೆಗಳಲ್ಲಿ ಪಟ್ಟ ನೂರಾರು ತೀವ್ರಾನುಭೂತಿಗಳು ನನ್ನಲ್ಲಿಯೇ ಮುಗಿಯುವುದೆಂತು? ಇವೆಲ್ಲಾ ಪುಷ್ಪಪರಾಗಗಳು ದುಂಬಿಗೆ ಕಾದಿರುವಂತೆ ನನ್ನ ಚೇತನದಲ್ಲಿ ಪಕ್ವದಶೆಯಲ್ಲಿದ್ದಿರಬೇಕು. ಬೃಂದಾವನದಲ್ಲಿ ಹಿಂದೆ ಅಂದು ಗೋಪಗೋಪಿಯರ ಬಾಳಿನಲ್ಲಿ ಪ್ರಾದುರ್ಭವಿಸಿದ ಮಹದನುಭವ ವೊಂದು ಪುನರ್ಭವಕ್ಕೆ ಕಾಮಿಸುತ್ತಾ ಈಗ ಏಳು ವರ್ಷಗಳ ಹಿಂದೆ ನಾನು ಕೇಳಿದ ಗೊಲ್ಲ ಹುಡುಗನ ಕೊಳಲಿನ ನಾದದ ಮೂಲಕ ಇಂತು ಸಂಸ್ಕೃತವಾದ

ನನ್ನ ಹೃದಯವನ್ನು ಹೊಕ್ಕು ಕಾಲಕ್ರಮೇಣ ಭಗವದನುಗ್ರಹರೂಪವಾಗಿಯೂ, ಭಗವದ್ಭಕ್ತರೂ ಭಾಗವತಪ್ರಿಯರೂ ಆದ ನನ್ನ ತೀರ್ಥರೂಪರ ಆಶೀರ್ವಾದ ರೂಪವಾಗಿಯೂ ಈ ಕೃತಿ ಜನಿಸಿರಬೇಕು—ಅಷ್ಟೆ.

ಈಗ ನೆನೆದುಕೊಂಡರೆ ಆ ಕೊಳಲಿನಲ್ಲಿ ಅಷ್ಟು ಇಂಪಿರಲಿಲ್ಲ. ಅದಕ್ಕಿಂತ ಎಷ್ಟೋ ಸುಸಂಸ್ಕೃತವೂ ಕುಶಲವೂ ಆದ ಮುರಳೀಗಾನವನ್ನು ಅನೇಕವಾಗಿ ಕೇಳಿದೇನೆ. ಆದರೆ ಅಂದಿನ ಕಣಸನ್ನು ಮಿಕ್ಕವು ತರಲಿಲ್ಲ. ಶಿಕ್ಷಿತವಾದ ಜಾತ್ಯಶ್ವವನ್ನು ಏರಿದರೆ ಆಗುವ ಸುಖ ಒಂದು ತೆರದ್ದು. ಪಳಗದಿರುವ ಕಾಡುಕುದುರೆಯನ್ನೇರಿದರೆ ಅದರ ನಡೆ ವಿಚಿತ್ರವಾಗುತ್ತದೆ; ಅದರ ವೇಗಕ್ಕೆ ಗುರಿಯಿಲ್ಲ; ಅದು ನಿಂತೆಡೆ ನಾವು ಇಳಿಯಬೇಕು. ಹಾಗೆ ಈ ಕಾಡುಗೊಲ್ಲನ ಕೊಳಲಿನ ಧ್ವನಿ ನನ್ನನ್ನು ಬೃಂದಾವನದ ಕಾಡಿನಲ್ಲಿಳಿಸಿ ಹೊರಟುಹೋಯಿತು. ಅಂದು ಗೋಕುಲಕ್ಕೆ ಅಕ್ರೂರ ಬಂದಿದ್ದ. ಆತ ಬರುವ ವೇಳೆಗೆ ರಾಮಕೃಷ್ಣಾದಿಗಳೂ ರಾಧೆ ಗೋಪಿಯರೂ ಹುಣ್ಣಿಮೆಯ ಆಟಕ್ಕೆ ಬೃಂದಾವನದಲ್ಲಿ ನೆರೆದಿದ್ದರು. ಅದು ಕೃಷ್ಣ ಕೊಳಲೂದುವ ಕೊನೆಯ ರಾತ್ರಿ. ಮರುದಿನವೇ ಆತ ಬಲಭದ್ರನೊಡಗೂಡಿ ಮಥುರೆಗೆ ತೆರಳುವವನಿದ್ದಾನೆ. ಆ ರಾತ್ರಿ ಮಿಕ್ಕೆಲ್ಲ ದಿನಕ್ಕಿಂತಲೂ ಇಂಪಾಗಿ ಕೊಳಲಿನ ಸರಗಳು ಗೋಕುಲದ ಎಲ್ಲರ ಮನವನ್ನೂ ಸೆಳೆಯುತ್ತಾ ಹೃದಯದಲ್ಲಿ ನರ್ತಿಸುತ್ತಾ ಬಗೆಬಗೆಯ ರಸವನ್ನು ಹಿಳಿಸುತ್ತಿವೆ. ಇಂಥ ಕೃಷ್ಣ ತನಗೆ ದಕ್ಕುತ್ತಾನೆಯೇ ಎಂದು ರಾಧೆಗೆ ಆತಂಕ. ಕೃಷ್ಣನಿಗೋ, ತಾನು ಇನ್ನೇನು ಮುರಳಿಯೆಸೆದು ರಾಧೆಯನ್ನು ತೊರೆದು, ಗೋಕುಲವನ್ನುಳಿದು, ನಂದನದ ತೀರವನ್ನು ಬಿಡುವ ಗಂಗೆಯಂತೆ ಲೋಕಕ್ಕೆ ಹೊರಡುತ್ತೇನೆ ಎಂಬ ಅರಿವೂ ಇಲ್ಲ. ಆದರೆ ಈ ಇರುಳಿನಲ್ಲಿ ಇದೆಲ್ಲ ನಡೆದುಹೋಗುತ್ತದೆ. ಕೃಷ್ಣ ಹೊಳಲಿನ ತುಯ್ತಕ್ಕೆ ಸಿಕ್ಕಿದ. "ಲೋಕಕೆ ಬೆಳೆವನ ಗೋಪೀಜನಮನ ಒಳಕೊಳ್ಳಲುಬಹುದೇ" ಎಂದು ಈ ರೂಪಕದಲ್ಲಿ ಗೋಪಿಯರು ಹೇಳಿಕೊಳ್ಳುವಂತೆ ಆ ರಾತ್ರಿ ನಂದಕುಮಾರ ವಾಸುದೇವನಾಗುವುದಕ್ಕಾಗಿ ಅಕ್ರೂರಪ್ರೇರಣೆಯಿಂದ ಗೋಕುಲ ಬಿಟ್ಟು ಮಥುರೆಗೆ ಹೊರಡಲು ಮನಸ್ಸು ಮಾಡುತ್ತಾನೆ. ಬೃಂದಾವನವನ್ನುಳಿದ ಮೇಲೆ ಕೃಷ್ಣನ ಕೊಳಲು ನಮಗೆ ತಿರುಗಿ ಕೇಳಿಬರುವುದಿಲ್ಲ. ಆತನ ಪಾಂಚಜನ್ಯ ಧ್ವನಿಯೂ ಚಕ್ರಸ್ವಿಷ್ಕಾರವೂ ನಾಡ ತುಂಬ ಮೊಳಗಾಡುತ್ತಾ ಅಲೆಯುತ್ತವೆ. ಆತ ಇನ್ನೂ ಮುಗ್ಧಭಾವದಲ್ಲಿರುವಾಗಲೇ ಕೊಳಲು ಅವನ ಕೈಯಿಂದ ಜಾರಿ ಹಳ್ಳಿಯ ಹೊನಲಬನದಲ್ಲಿ ಬಿದ್ದುಹೋಯಿತು—ನನ್ನಂಥ ಮುಗ್ಧರ ಮನಸ್ಸಿನಲ್ಲಿ ಆಗಾಗ ಮೊಳಗಿಡುವುದಕ್ಕೆ. ಆದರೆ ಗೋಕುಲದ ಜನ ಮಾತ್ರ ಆತನ ಅಪ್ರಮೇಯ ಮಹಿಮೆಯನ್ನರಿತಂತೆ ಆತನ ಮಧುರ ಮುರಳೀಗಾನದಲ್ಲಿ ಆತ್ಮಪ್ರಭೆಯ ಪ್ರೇಮಪ್ರಚುರವರ್ಣವನ್ನೂ ಕಂಡರು. ಮಿಕ್ಕ ಲೋಕ, ಪಾಂಡವರೂ ಕೂಡಿ, ಈ ಮಧುರಭಾವವನ್ನು

ಇಷ್ಟು ಸ್ಪಷ್ಟವಾಗಿ ಕಂಡಿತೇ ಎಂದು ನನಗೆ ಸಂಶಯ. ಮಥುರೆಗೆ ತೆರಳಿದ ಬಳಿಕ ಕೃಷ್ಣ ರಾಧೆಯನ್ನು ಮರೆತನೋ ಏನೋ—ಕೃಷ್ಣನುಳಿದ ರಾಧೆಯ ಪಾಡು ತಾನೇ ಏನಾಯಿತೋ—ಇದನ್ನರಿತುಕೊಳ್ಳುವುದಕ್ಕೂ ನಮ್ಮ ಮನಸ್ಸು ಕುತೂಹಲ ಗೊಳ್ಳದು. ರಾಧಾಶ್ಯಾಮರ ಪ್ರಣಯವನ್ನು ಮಾತ್ರ ನಾವು ಮರೆತಿಲ್ಲ. ಇವರ ಬಾಳಿನಲ್ಲಿ ಮೂಡಿದ ಆ ಅನುಭವ ಅಪೂರ್ವ, ಅಮೋಘ—ಆದುದರಿಂದಲೇ ಅದು ಪದೇ ಪದೇ ನಮ್ಮ ಹೃದಯದಲ್ಲಿ ಅನೇಕ ರೀತಿಯಾಗಿ ಬಾಳುಗೊಳ್ಳುತ್ತದೆ. ಆ ಮಹದನುಭವಕ್ಕೆ ಇಂಬುಗೊಟ್ಟು ನಾನು ಒಂದು ಬಗೆಯ ಧನ್ಯತಾಭಾವವನ್ನು ಪಡೆದೆ. ಹಿಂದೆ ಎಲ್ಲೋ ನಾನು ಗೋಕುಲದಲ್ಲಿ ಗೊಲ್ಲತಿಯಾಗಿ ಹುಟ್ಟಿರಬೇಕು. 'ಮಳೆಯು ನಾಡ ತೊಯ್ಯುತಿರೆ' ಎಂಬ ಪದ್ಯ ಬರೆದಾಗಲೂ 'ನವೋದಯಂ' ಎಂಬುದನ್ನು ಬರೆದಾಗಲೂ ಈ ಸ್ಮೃತಿ ಜಾಗೃತವಾಯಿತು. 'ಗೋಕುಲ ನಿರ್ಗಮನ'ದಲ್ಲಿ ಇದು ಪೂರ್ಣರೂಪವನ್ನು ಪಡೆದಿದೆ.

ನನಗೆ ಸಂಗೀತ ನೃತ್ಯಶಾಸ್ತ್ರಗಳಲ್ಲಿ ಅಭಿರುಚಿ ಆಸಕ್ತಿ ಇರುವಷ್ಟು ಪರಿಶ್ರಮ ಪರಿಚಯಗಳಿದ್ದರೆ ಚೆನ್ನಾಗಿತ್ತು. (ಆಗ ಈ ಕಾವ್ಯ ಬರೆಯುತ್ತಿರಲಿಲ್ಲ ಎನ್ನುವಿರೇನೋ—ಇರಬಹುದು.) ಈ ಹಾಡುಗಳನ್ನು ಹಾಡಿಕೊಂಡೇ ಬರೆದೆ. ರಾಗಗಳು ನವೀನವಾಗಿಯೂ ಕಾಂತಿಯುಕ್ತವಾಗಿಯೂ ಇದ್ದುವೆಂದು ಜ್ಞಾಪಕ. ಅವನ್ನು ಗುರುತಿಸಿ ಸ್ವರಸಂಚಾರಕ್ರಮವನ್ನು ಬರೆದಿಡುವಷ್ಟು ಸಂಸ್ಕಾರವಿಲ್ಲದೆ ಅದೆಲ್ಲಾ ಈಗ ನಷ್ಟವಾಗಿದೆ. ಆದುದರಿಂದ ಈ ಗೀತಕಾವ್ಯ ಪುನಃ ಸಂಗೀತಕಲಾ ಕೋವಿದನೂ, ಭಾವಜ್ಞನೂ, ನನ್ನ ವಿಷಯದಲ್ಲಿ ಪ್ರೀತಿಯುಳ್ಳವನೂ ಆದ ಪ್ರತಿಭಾವಂತನ ಸ್ವರಪ್ರಸ್ತಾರಕ್ಕೆ ಸಿಕ್ಕುವ ವರೆಗೂ ಈ ಕೃತಿಯ ಸಾಹಿತ್ಯ ಮಾತ್ರ ಸಹೃದಯರ ಗಮನಕ್ಕೆ ತಕ್ಕುದಾಗಿದೆ. ನಾನು ಓದಬೇಕಾದರೆ ಒಂದೊಂದು ವೇಳೆಗೆ ಒಂದೊಂದು ತೆರದಲ್ಲಿ ಓದುತ್ತೇನೆ. ಒಂದೊಂದು ಬಾರಿಗೆ ಒಂದೊಂದು ರೀತಿಯಾಗುತ್ತದೆ ಈ ಓದುಗಾರಿಕೆ. ಇದನ್ನು ಮತ್ತೆಮತ್ತೆ ಕೇಳಿದ ನೀವೂ ನನ್ನ ಮಿಕ್ಕ ಪ್ರಿಯಮಿತ್ರರೂ ಇದರ ಸಾಹಿತ್ಯವನ್ನೂ ಛಂದಸ್ಸುಗಳನ್ನೂ ಆದರಿಸಿ, ಚೆನ್ನು ಎಂದಿರಬೇಕು. ಬಿಮ್ಮನ್ನದಿರಲೆಂದು ಪ್ರತಿ ಹಾಡಿಗೂ ವೃತ್ತಕ್ಕೂ ನನ್ನ ನೆನಪಿಗೆ ಬಂದ ರಾಗಗಳ ಹೆಸರನ್ನೇನೋ ಕೊಟ್ಟಿದೇನೆ. ಇವುಗಳಿಂದ ಎಷ್ಟು ಫಲವೋ ಕಾಣೆ. ಈ ಕೃತಿಯ ನೆಪದಲ್ಲಿ ನನ್ನ ಗೆಳೆಯರು ನನಗೆ ಹೆಚ್ಚು ವಿಶ್ವಾಸ ತೋರಿಸಿದಾರೆ. ಇದರಿಂದ ಬಾಳಿಗೊಂದು ತೆರದ ಸಿರಿ ಬಂದಂತಾಗಿದೆ. ಕಾವ್ಯದ ಉದ್ದೇಶ ಇದಲ್ಲದಿದ್ದರೂ ಇದರ ಫಲ ಬಲು ಸವಿ.

ಈ ಸವಿಗಳನ್ನು ನೆನೆಯುತ್ತಾ ಮನಸ್ಸಿಗೆ ಒಂದು ತೆರದ ಅಳುಕೂ ಬರುತ್ತಿದೆ. ರಾಮಕೃಷ್ಣಾದಿ ಮಹದ್ವ್ಯಕ್ತಿಗಳು ಬಂದು ಮಿಂದುಹೋದುದರಿಂದ ಮನಸ್ಸೇನೋ ಪವಿತ್ರವಾಯಿತು—ನಿಜ. ಆದರೆ ಈ ದಿವ್ಯವ್ಯಕ್ತಿಗಳ ತೇಜಸ್ಸಿಗೆ ಈ ಮನದ

ಸೋಂಕಿನಿಂದ ಎಲ್ಲಿ ಕುಂದುಬಂದಿದೆಯೋ ಕಾಣೆ. ಏಕೆಂದರೆ ಕವಿಯು ಮನಸ್ಸು ನಮ್ಮ ಪುರಾಣಗಳಲ್ಲಿ ಆಗಾಗ ಬರುವ ಕೊಳಗಳಂತೆ. ಅವುಗಳಲ್ಲಿ ಮಿಂದವರು ಕೆಲವದರಲ್ಲಿ ಸುರೂಪಿಗಳಾಗುತ್ತಾರೆ, ಮತ್ತೆ ಕೆಲವದರಲ್ಲಿ ವಿರೂಪವಡೆಯುತ್ತಾರೆ. ಈ ಮಾರ್ಪಾಡು ಕವಿಯು ಆತ್ಮರಸದ ರುಚಿಯಂತೆ ಆಗುತ್ತದೆ. ಈ ಪ್ರಭಾವ ಆತನ ಭವದಂತೆ, ಅನುಭವದಂತೆ. ಈ ಕಾವ್ಯದಿಂದ ಮೂಡಿಬರುವ ಕೃಷ್ಣ ಒಂದು ತೆರದವ, ರಾಮನೊಂದು ತೆರದವ, ಅಕ್ರೂರನೊಂದು ಬಗೆ, ರಾಧೆಯೊಂದು ಬಗೆ. ಈಕೆಗೆ ತಾಯಿಯಿಲ್ಲ, ತಂಗಿಯಿಲ್ಲ; ಈಕೆಗಿನ್ನೂ ಮದುವೆಯೇ ಇಲ್ಲ. ಇಲ್ಲಿನ ಗೋಪಗೋಪಿಯರಿಗೆ ಈರ್ಷ್ಯಾಸೂಯೆಗಳಿಲ್ಲ. ದರ್ಶನ ಇಂತು ನವೀನವಾದುದರಿಂದ ಭಗವದ್ಭಕ್ತರು ಇಲ್ಲಿ ಈ ಭವ್ಯವ್ಯಕ್ತಿಗಳ ಪೂರ್ಣಕಾಂತಿಯನ್ನು ಕಾಣದೆ ಮೋದಗೊಳ್ಳದಿರಬಹುದು. ವಸ್ತು ಹಳೆಯದಾದುದರಿಂದ ಅತ್ಯಾಧುನಿಕರಿಗೆ ಇದು ಸಹ್ಯವಾಗುತ್ತದೋ ಇಲ್ಲವೋ. ಏನೇ ಆಗಲಿ, ಈ ಕಾವ್ಯನಿರ್ಮಾಣದಲ್ಲಿ ನನ್ನ ಆತ್ಮ ಆನಂದಪ್ರದೀಪ್ತಿಯನ್ನು ಪಡೆಯಿತು. ಅದು ತೇಜಗೊಂಡ ರೀತಿಗಾಗಿ ಇದು ಆತ್ಮಕುತೂಹಲಿಗಳಾದ ಸಹೃದಯರಿಗೆ ಗ್ರಾಹ್ಯವಾದೀತು.

ಇಷ್ಟಾದರೂ ನಾನು ಈ ಕಾವ್ಯವನ್ನು ಏಕೆ ಬರೆದೆ ಎಂಬ ಪ್ರಶ್ನೆ ಉಳಿಯಿತಲ್ಲವೇ ? ನಿಮಗೊಂದು ಎದುರುಪ್ರಶ್ನೆ ಹಾಕುತ್ತೇನೆ, ಚಿದಂಬರಂ. ಈ ಗೀತಕಾವ್ಯದ ಪ್ರಕಟನೆಯಿಂದ ಕಾವ್ಯಾಲಯದ ಯಶಸ್ಸಾಗಲಿ ಅಥವಾ ಅರ್ಥಸಂಪತ್ತಿಯಾಗಲಿ ಹೆಚ್ಚುವ ಸಂಭವ ಕಡಮೆ. ಹೀಗಿದ್ದರೂ ಈ ಕಷ್ಟಕಾಲದಲ್ಲಿ ಇದಕ್ಕಾಗಿ ಕಾಗದ ಮಿಗಿಸಿ ಇದನ್ನು ಅಚ್ಚುಮಾಡಲು ಉತ್ಸಾಹಗೊಂಡಿರುವ ನಿಮ್ಮ ಈ ಪ್ರೇಮಕ್ಕೆ ವ್ಯಾಜವೇನು ?—ಇದೊಂದು ಸಾಹಿತ್ಯಶಿಶು; ಇದರ ಹುಟ್ಟಿನಿಂದ ತಾಯಿಮನಕ್ಕೆ ಸುಖ; ತಮ್ಮದೆಂದು ಕೈಗೆತ್ತಿಕೊಂಡ ನನ್ನೆಲ್ಲ ಪದ್ಯಗಳ ಸಾಕುತಾಯಿ ತೀ. ನಂ. ಶ್ರೀ ಯವರಿಗೆ ಸಂತೋಷ; ಲಾಲನೆಪಾಲನೆಯಿಂದ ನಿಮ್ಮಂಥ ಸಹೃದಯ ಬಂಧುವರ್ಗಕ್ಕೆ ಉಲ್ಲಾಸ. ಇದನ್ನು ಆದರದಿಂದ ಹಾಡಿಸಿ ಕೇಳಿದ ನನ್ನ ಪ್ರಿಯಮಿತ್ರರೂ ಕಾವ್ಯಜ್ಯೋತಿಷ್ಕರೂ ಇದರ ಜಾತಕ ಚೆನ್ನು, ಸಾಮುದ್ರಿಕೆ ಲಕ್ಷಣವಾಗಿದೆ ಎಂದಿದಾರೆ. ಸಂತರಾಸರೆಯಲ್ಲಿ ಇದು ಎಂತಾದರೂ ಬೆಳೆದು ಬಾಳಲಿ ಎಂದು ಹರಕೆಯಿಡೋಣ.

ಇತಿ ಶಂ.

**ಪು. ತಿ. ನ.**

ತಾರಣ ಸಂವತ್ಸರ
ಪುಷ್ಯ ಶುಕ್ಲ ಪೂರ್ಣಿಮಾ

# ಪಾತ್ರಗಳು

ಕೃಷ್ಣ
ಬಲರಾಮ
ಶ್ರೀದಾಮ
ಅಕ್ರೂರ
ಸುದಾಸ
ಸುಬಲ

ರಾಧೆ
ನಾಗವೇಣಿ

ಗೋಪಾಲಕರು
ಗೋಪಿಯರು
ಹಿರಿಯರು
ಋಷಿಗಳು

ಮೇಳದವರು

ಕವಿ
ಗೊಲ್ಲರ ಹುಡುಗ

[**ಸೂಚನೆ.**—ನೃತ್ಯ ಪ್ರಧಾನವಾದ ನಾಟಕವಿದು. ಇಲ್ಲಿನ ಹಾಡುಗಳ ಅನೇಕವನ್ನು ಮೇಳದ ಗಾಯಕರು ಸಂದರ್ಭಕ್ಕೆ ತಕ್ಕಂತೆ ಪಾತ್ರಗಳ ಜೊತೆಯಲ್ಲಿಯೂ ಅವರ ನರ್ತನಾಂಗವಾಗಿಯೂ ಹಾಡುತ್ತಾರೆ.]

# ಗೋಕುಲ ನಿರ್ಗಮನ

ನಾಂದಿ

ಜಗದೀ ಮಾಯೆಯು ಹೊಳೆಲಿಡುತಿರುವಾ
ಮರೆದೈವದ ಕೊಳಲ
ನಮ್ಮೆದೆ ಅರೆಚಣವಾದರು ಲಾಲಿಸಿ
ನೀಗಲಿ ಭವದಳಲ

## ಅಕ್ರೂರಾಗಮನ

(ಮೋಡ ಕವಿದಿರುವ ರಾತ್ರಿ. ಕವಿ ತನ್ನ ಮನೆಯಲ್ಲಿ ಇದ್ದಾನೆ. ಮರೆಯಲ್ಲಿ ಗೊಲ್ಲ ಹುಡುಗರು ಊದುವಂಥ ಕೊಳಲ ನಾದವು ಆಗಾಗ ಕೇಳಿಬರುತ್ತದೆ.)

ಕವಿ

ಆವನೀ ಉನ್ಮತ್ತ ಈ ಸರಿಯಹೊತ್ತಿನೊಳು
ಕೊಳಲ ಬಾರಿಸಿ ಮಧುರರಾಗವನು ರಚಿಪನಿಂತೆ
ಕರಿಮುಗಿಲ ಬಲೆಯೊಳಗೆ ಪೆರೆ ಸಿಲುಕಿ ನೋಯುತಿದೆ
ಗಾಳಿ ಬಾಸಲೆಯುತಿದೆ ದೆಸೆಗೆಟ್ಟ ತಿರುಕನಂತೆ

ಈಗಿತ್ತ ಆಗತ್ತ ಕಿವಿಯಾಚೆ ದೂರತ್ತ
ಮುಗಿಲುಮರೆ ಜೊನ್ನದಿಂ ಬೂದಾದ ರಜನಿಪಥದಿ
ತರಳಮುರಳೀನಾದವಿದನೆಲರು ಒಯ್ಯುತಿದೆ
ಬಾಲಕೃಷ್ಣನ ತೃಣಾವರ್ತನಂದೊಯ್ದ ತೆರದಿ

(ಒಳತೆರೆ ಎದ್ದು ಬೆಳುದಿಂಗಳಾಗುವುದು.)

ಏನು ಚೋದ್ಯವಿದಯ್ಯ ತಾಮಸಿಯ ಕಾಳೆದೆಯೊ-
ಳನುರಾಗವುದಿಸಿದೊಲು ತಿಂಗಳಿನ ಬೆಳಕಿದಾಯ್ತು
ಬಯಲೊಳಗೆ ಬನವಾಯ್ತು ನೆಳಲೊಳಗೆ ರೂಪಾಯ್ತು
ಕಾಲ ಹಿಮ್ಮೊಗ ಹರಿದು ಗೋಕುಲವೆ ಕಣ್ಣಿಗಾಯ್ತು

(ಮುರಳೀನಾದ ಮಧುರತರವಾಗುವುದು. ಕವಿ ಮರೆಯಾಗುತ್ತಾನೆ. ಹಾಡುತ್ತಾ ಗೋಪಿಯರು ಬರುತ್ತಾರೆ.)

## ಗೋಪಿಯರು

ಹಾಡು : ರಾಗ—ಬಾಗೇಸರಿ

ಬಾ ಸಖಿ ಬೃಂದಾವನಕೆ
ಆನಂದನಿಕೇತನಕೆ—ಬೇಗ ಬಾ ಸಖಿ

ಯಮುನೆಯ ತೆರೆತೆರೆ ತಾಳವ ಹೊಯ್ದು
ತೀರದ ತರುತರು ಅಭಿನಯಗೆಯ್ದು
ಲತೆಲತೆ ಬಳುಕಿ ಗಾಳಿಗೆ ತಳುಕಿ
ಕೊಳಲಿಗೊಲೆವಾ ತಾಣಕೆ—ಬೇಗ ಬಾ ಸಖಿ

ಯಾಮಿನಿಮಾತೆಯ ವಂಚಿಸಿ ಚಂದ್ರ
ಹಣಿಕಿದನಿದೆಕೋ ಮುಗಿಲೊಳತಂದ್ರ
ರಸವೇರಿದ ತೆರ ಹಸನಾಯಿತು ತಿರೆ
ಮಧುರ ಮುರಳೀನಾದಕೆ—ಬೇಗ ಬಾ ಸಖಿ

ಕಾರ್ಮುಗಿಲಾಗಸವನು ಹೊದೆವಂತೆ
ನಿದ್ದೆಯು ಮುಸುಕಿತು ಹಿರಿಯರನಿಂತೆ—
ಜಡದೇಹವ ಮನೆಯೊಳೆ ಬಿಟ್ಟಂತೆ
ಹಗುರಾದೆವು ಈ ರಾಗಕೆ—ಬೇಗ ಬಾ ಸಖಿ

ದಿವ ತೊರೆಯಿತು ತನ್ನಯ ಸಾರವನೇ
ಇಳೆ ಕಳೆಯಿತು ತನ್ನಯ ಭಾರವನೇ
ಜನ ಮರೆತಿತು ತನ್ನಯ ರೂಢಿಯನೇ
ಮೋಹನ ಮುರಳೀಗಾನಕೆ—ಬೇಗ ಬಾ ಸಖಿ

ಎನ್ನದು ತನ್ನದು ಇದು ಸರಿ ತಪ್ಪು
ಇಲ್ಲದಾಯ್ತು ಕೊಳಲುಲಿವೇ ಸೆಪ್ಪು
ಸಂಸಾರ ದೂರ ಬಿನದವೇ ಸೇರ
ಇನ್ನು ನಮಗೀ ಗಾನಕೆ—ಬೇಗ ಬಾ ಸಖಿ

(ಹಾಡಿಕೊಂಡು ಹೋಗುತ್ತಾರೆ.)

(ಗೋಪಾಲಕರ ಗುಂಪು ಹಾಡಿಕೊಂಡು ಬರುತ್ತದೆ.)

## ಗೋಪಾಲಕರು

ಹಾಡು : ರಾಗ—ಮಾಂಡ್

ಬನ್ನಿ ಬನ್ನಿ ಸೇಹಿಗರೇ
ಹಳುವಿಗೋಡುವ
ನಮ್ಮ ಕೃಷ್ಣ ಕೊಳಲನೂದಿ
ಸನ್ನೆ ಮಾಡುವ—

ಕೃಷ್ಣ ಕೊಳಲನೂದುತಿರೆ
ನಿದ್ದೆಯೆಂತು ಬಹುದೆಮಗೆ
ರಾಮ ಹರೆಯ ಮೋದುತಿರೆ
ನಿಲ್ವೆವೆಂತು ಮನೆಯೊಳಗೆ—ಬನ್ನಿ ಬನ್ನಿ

ಪಟವ ದಾರ ತುಯ್ಯುವೊಲು
ಮನವ ತುಯ್ವುದೀ ಕೊಳಲು
ಅದರ ಸರಕೆ ಹಾರಾಡೆ
ನಲವೆಲರೊಳು ತಾರಾಡೆ—ಬನ್ನಿ ಬನ್ನಿ

ಸುಮನೆ ಯಮುನೆ ಕಲ್ಯಾಣಿ
ಚೆಲುವೆ ಚೆನ್ನಿ ಶುಕವಾಣಿ
ಹೊಸಬಿ ಹೊನ್ನಿ ಹರಿಣಾಕ್ಷಿ
ನೆರೆದಿಹರೆನಲಿದೆ ಸಾಕ್ಷಿ—ಬನ್ನಿ ಬನ್ನಿ

ಹಗಲಿನಾಚೆಯಿರುಳ ಕರೆ
ನೇರಿಟ್ಟಿತು ಸೇಹಿಗರೆ
ಆಸೆಯಂತೆ ಬಾಳಾಗೆ
ತೋಷವೊಂದೆ ಮೇಲಾಗೆ—ಬನ್ನಿ ಬನ್ನಿ

(ಹಾಡಿಕೊಂಡು ಹೋಗುವರು.)

(ಗೋಪಿಯರ ಮತ್ತೊಂದು ತಂಡ ಹಾಡಿಕೊಂಡು ಬರುವುದು.)

### ಗೋಪಿಯರು

ಹಾಡು : ರಾಗ—ಹಿಂದುಸ್ತಾನಿ ತೋಡಿ

ಕೃಷ್ಣನ ಕೊಳಲಿನ ಕರೆ—ಆಲಿಸು
ಕೃಷ್ಣನ ಕೊಳಲಿನ ಕರೆ—ತ್ವರೆ ತ್ವರೆ

ತೊಟ್ಟಿಲಿನ ಹಸುಗೂಸ ಮರೆ ಮರೆ
ಪಕ್ಕದ ಗಂಡನ ತೊರೆ ತೊರೆ
ಬೃಂದಾವನಕೆ ತ್ವರೆ ತ್ವರೆ—ಕೃಷ್ಣನ

ಮುತ್ತಿನ ಕುಪ್ಪಸ ಹರಳೋಲೆ
ಮಲ್ಲಿಗೆ ಜಾಜಿ ಮುಡಿಮಾಲೆ
ಹೆಜ್ಜೆಯ ಸೇವುರ ಗೆಜ್ಜೆಯ ಪಿಲ್ಲಿ
ಮರೆತೇ ಬಂದೆವೆ ಮನೆಯಲ್ಲೇ ಸಖಿ—ಕೃಷ್ಣನ

ಹೊತ್ತಾರೆ ಹೊರೆಗೆಲಸ ಮಿಕ್ಕರೆ ಮಿಗಲಿ
ಮಿಕ್ಕಾದ ನೆರೆಹೊರೆ ನಕ್ಕರೆ ನಗಲಿ
ಬೃಂದಾವನದೊಳಾಲಿಸಿಗೋ ಮುರಲೀ—ಕೃಷ್ಣನ

ನೇಸರ ಕಿರಣ ಆಗಸದಿರುಳ
ತೊರೆಯಿಸುವ ರೀತಿ
ಮುರಳೀಧರನ ಮುರಳೀಮಾಯೆಗೆ
ಮನಜಿಟ್ಟಿತೆ ಭೀತಿ
ಇನ್ನಾಯಿತೆ ಪ್ರೀತಿ—ಕೃಷ್ಣನ

(ಹಾಡುತ್ತಾ ಹೋಗುತ್ತಾರೆ.)

(ಊರಿನ ಹಿರಿಯರು ಪ್ರವೇಶಿಸುತ್ತಾರೆ. ಇವರ ಜತೆಗೆ ರಾಧೆಯ ತಂದೆ ಸುದಾಸ ಆಕೆಯ ಸಖಿಯ ತಂದೆ ಸುಬಲ ಇವರೂ ಬರುತ್ತಾರೆ.)

ಹಿರಿಯರು

(ಒಬ್ಬೊಬ್ಬರೂ ಒಂದೊಂದು ಮಾತು ಹೇಳುತ್ತಾರೆ.)

ನೀನು
ನೀನೂ
ನೋಡಿದಿರಾ

ಕೇಳಿದಿರಾ
ಇದೊ ಸರಿಹೊತ್ತು
ಸುತ್ತೂ ಮುತ್ತೂ ಹಬ್ಬಿದೆ ಹಳುವು
ಜನದೀ ಸುಳಿವು

ಇವರೀ ಸಲಿತ ಈ ತೆರ ಕುಣಿತ
ಏನಿದು ಹುಚ್ಚು ಯಾರಿಗೆ ಮೆಚ್ಚು
ಮನೆಮಠವೆಲ್ಲವ ತೊರೆದೀ ಮಂದಿ
ಇಂತು ನೆರೆಯೆ ಭಯವೆಲ್ಲವು ನಂದಿ
ಯಾರಿಗೆ ಮೆಚ್ಚು
ಏನಿದು ಹುಚ್ಚು

ಸುಬಲ

ನಿನ್ನ ಮಗಳು ರಾಧೆಯು ಬಹಳಂತೆ
ನಂದಕುಮಾರನ ಜತೆಗಿಹಳಂತೆ

ಸುದಾಸ

ಸುಳ್ಳು ಸುಳ್ಳು ಮಗು ಮನೆಯಲ್ಲಿಹುದು
ಈ ಪೊಳ್ಳುಮಾತು ಎನಗಹಿತರದು
ಪಾಪ ತಬ್ಬಲಿ ಮಲಗಿದೆ ಸೋತು

ಸುಬಲ

ಪಾಪ ಪಾಪ ಬರಿ ಬೀದಿಯ ಮಾತು

ಒಬ್ಬ

ಅಹಹ ಮಧುರ ಮಧುಮಧುರ

ಸುದಾಸ

ಏನು—ಏನು

ಒಬ್ಬ

ಅಗೊ ಅಗೊ ಮುರಲೀ—ಲಾಲಿಸು ಬಧಿರ

ಹಿರಿಯರು

ಅಹಹಾ—ಅಹಹಾ
ಅರುವತ್ತರೊಳರ್ಧವನೇ ಜಾರಿಸಿತು
ನಡುಹರೆಯದ ಹುಮ್ಮಸ್ಸನೆ ತೋರಿಸಿತು
ಏಗೈದೆವೊ ಏಗೈದೆವೊ ಕಜ್ಜ
ಇಂದುತನಕ ಇದ ಕೇಳದೆ ಅಜ್ಜ

ಸುದಾಸ

ಹುಚ್ಚು ಹುಚ್ಚು ಜಗಕೆಲ್ಲಕು ಹುಚ್ಚು

ಹಿರಿಯರು

ಓ ಸುದಾಸ ನೀ ಬಲುಪೆಚ್ಚು
ಬನ್ನಿರಿ ಬನ್ನಿರಿ ಹಳುವಿಗೆ ನಡೆವ
ಸನಿಯದೊಳೇ ಕೊಳಲಿಂಪನು ಪಡೆವ

(ಸುದಾಸ ಸುಬಲರು ಹೊರತಾಗಿ ಮಿಕ್ಕವರು ಹೋಗುವರು.)

ಸುದಾಸ

ಓ ಸುಬಲ
ನಿನಗೂ ಈ ಕೊಳಲಿಸಿದಾಗಿಹುದೇ

ಸುಬಲ

ಆಲಿಸಯ್ಯ ಕಿವಿ ಕಿವುಡಾಗಿಹುದೇ

ಸುದಾಸ

ಇಂಪಿಲ್ಲವೆಂದೆನುವಂತಿಲ್ಲ
ಕೊಳಲನು ಬಾಜಿಸೆ ಪೋರನು ಬಲ್ಲ

ಸುಬಲ

ಅವ ಬಾಜಿಸುತಿರೆ ಹರಟೆಗೆ ಸೊಗಸು

ಸುದಾಸ

ಏನಿದೆ ಮಾತಿಗೆ ಎಲ್ಲವು ಹೊಲಸು

ಸುಬಲ

ಇಂದಿನ ಸುದ್ದಿಯು ತಿಳಿಯದೆ ಅಣ್ಣಾ

ಸುದಾಸ

ಉಹ್ಞು ಉಹ್ಞು ಏನೇನ್ ಯಾರಿಗೆ ಬನ್ನ

ಸುಬಲ

ಮಧುರಾಪುರದರಸರ ಕಡೆಯಿಂದ
ಸರದಾರನೊಬ್ಬನೈತಂದ
ನೆಟ್ಟನೆ ಗೋಪನ ಮನೆಗೇ ಬಂದ
ಅಹ್ಹಾ ಆತನ ಠೀಕೇ ಠೀಕು
ಆತನು ಬಲು ದೊಡ್ಡವನಿರಬೇಕು

ಸುದಾಸ

ಆ ಮಾತಿರಲಿ ಬೇಹೇಸಣ್ಣಾ

ಸುಬಲ

ಬಿಲ್ಲ ಹಬ್ಬಕೆಮಗೌತಣವಣ್ಣಾ

ಸುದಾಸ

ಓಹೋ ನಿನಗೂ

ಸುಬಲ

ಹ್ಞೂ ಹ್ಞೂ ನಿನಗೂ
ಈ ಊರಿನ ಗಂಡಸರೆಲ್ಲರಿಗೂ

ಸುದಾಸ

ಎಂದಿಗೆ ಪಯಣ

ಸುಬಲ

ನಾಳೆಗೆಯೇ

ಸುದಾಸ

ನಾಳೆಗೆಯೇ
ಎಂದೂ ಇಲ್ಲದುದೀ ಸಲವೇಕೋ

ಸುಬಲ

ಆರು ಬಲ್ಲರೀ ರಾಜನ ಮನವ

ಸುದಾಸ

ದಿಟ ಆತನೊಂದುತೆರ ಹುಚ್ಚಿನವ
ಏನಾದರು ಕೇಡನು ಬಗೆದಿಹನೊ

ಸುಬಲ

ಗೋಪನೊಳ್ಳೆಯವ ದೊರೆಗೂ ಮೆಚ್ಚು
ಕೇಡುಮಾಡಲಿಪಗಾರಿಗೆ ಕೆಚ್ಚು

ಸುದಾಸ

ಗೋಪನೊಳ್ಳೆಯವ ಸರಿ ಆ ಮಕ್ಕಳೊ
ಅವರ ಮೇಲೆ ದೊರೆವರೆಗೂ ದೂರು
ಹಾಳಾಯಿತು ಅವರಿಂದೆಮ್ಮೂರು

ಸುಬಲ

ದೂರಬೇಡ ದೂರಬೇಡ ತಾತ
ಅಳಿಯನಪ್ಪನೋ ಏನೋ ಆತ

ಸುದಾಸ

ಸಾಕು ಸುಮ್ಮನಿರು ನಿನಗೂ ಹುಚ್ಚು

ಸುಬಲ

ಹುಡುಗಿ ಕಡುಚೆಲುವೆ ನೀನೂ ಗಣ್ಯ
ಎಂತಿಹುದೋ ಆ ಹಸುಳೆಯ ಪುಣ್ಯ

ಸುದಾಸ

ಗೋಪ ಕೇಳಿದರೆ ನಾ ಕೊಡೆನೆನ್ನೆ
ಆರಿಗೆ ಕಡಮೆಯೊ ನನ್ನೀ ಕನ್ನೆ

ಸುಬಲ

ಹಾ ಹಾ ಬಲು ಇಂಪೋ ಈ ಕೊಳಲು

ಸುದಾಸ

ಅಗೊ ಆ ಮರದೆಡೆ ಯಾರದು ನೆಳಲು

ಸುಬಲ

ಹೋ ರಾಜಪುರುಷ ಕೇಳಿತೊ ಮಾತು
ನಡೆ ಈ ತಾಣವ ಬಿಡುವುದೊಳ್ಳಿತು

ಸುದಾಸ

ಏತಕೆ ಒಬ್ಬನೆ ಬಂದಿಹನೋ

ಸುಬಲ

ಈ ಕೊಳಲೆಳೆತಕೆ ನಂದನೊ ಏನೋ

ಸುದಾಸ

ಹುಚ್ಚು ಹುಚ್ಚು ಎಲ್ಲರಿಗೂ ಹುಚ್ಚು

(ಹಿಂದೆ ಹಿಂದೆ ನೋಡಿಕೊಂಡು ಹೊರಡುತ್ತಾರೆ.)

(ಅಕ್ರೂರ ಸಾಮಾನ್ಯವೇಷದಿಂದ ಪ್ರವೇಶಿಸುತ್ತಾನೆ.)

ಅಕ್ರೂರ

ರಾಗ—ಮಾಯಾಮಾಳವಗೌಳ

ಶಿಶಿರಕುಸುಮಾಮೋದೋಚ್ಛ್ವಾಸಂ ಸುಧಾಂಶುಕರಾದೃತಂ
ವಿಮಲಯಮುನಾತೋಯಾಶ್ಲಿಷ್ಟಂ ಮನೋಹರಮರ್ಮರಂ
ಮಧುರಮುರಲೀನಾದಾವಿಷ್ಟಂ ವಿಚಿತ್ರಸುಖಾವಹಂ
ವಿಪಿನಮಿದಹಾ ನಾನೇಪೇಕ್ಷ್ಯಂ ವಿಮುಂದಮುದಾಂತರಂ

ರಾಗ—ಬಿಲಹರಿ

ನಂದಗೋಪನ ಮನೆಯು ತೂಗುಮಂಚದಮೇಲೆ
ನಿದ್ದೆಮೇಲುಡುವಾತ್ಮ ಹೊದೆಯುಲಿರೆ ಇನಿಯಳ್
ಮುಟ್ಟಿ ಬಾ ಎನುವಂತೆ ಈ ಕೊಳಲು ಕಿವಿಗೊಳಲು
ಬಂದೆನೀ ಅಭಿಸಾರವೆನಿತು ಲೇಸಾಯ್ತು

ರಾಗ—ಮೋಹನ

ಸಕಲೇಂದ್ರಿಯಂಗಳಿಗು ನೇತ್ರವೇ ಮಿಗಿಲೆಂದು
ಲೋಕ ನುಡಿಯುವುದಿರಲಿ ಆದೊಡಿಂದು

ಈ ಹಳುವೊಳೀ ಗಾನವಾಲಿಸಲು ತೋರುವುದು
ಶ್ರೋತ್ರವೇ ಎಲ್ಲದಕು ಮಿಗಿಲು ಎಂದು

ರಾಗ—ಕಾಂಭೋದಿ

ಶಾಸ್ತ್ರದಿಂ ಕೇಳ್ವಿಯಿಂ ಪರಿಕಿಸುವ ಬಳಕೆಯಿಂ
ಗೇಯದುರ್ಜ್ಞೇಯವೆಂದೆನಿಸಿರ್ದ ಮನವು
ಇಂದೊರ್ವ ಗೋವಳನ ಕೊಳಲುಲುಹಿಗಾಯೆಂದು
ಬೆರಗಪ್ಪ ವೈಚಿತ್ರ್ಯಕೇವೇಳ್ವೆನು

ಹಾಡು : ರಾಗ—ಕಮಾಚ್

ತೆರೆಯಿತೆನ್ನ ಮನವು—ಕೊಳಲೊಳು
ಹರಿಯೆ ಗೋಪಾಲನೊಲವು || ಪ ||
ಕತ್ತಲುಳಿದು ಈ ಇರುಳು ಜೊನ್ನಕೆ
ಮಧುರಳಾಗಿ ಮನಬಿಚ್ಚಿಹ ತೆರದೊಳು || ಅ. ಪ ||

ತರಳದಳವ ಜಲದೇವಿಯು ಕರವೆನೆ
ಜಲದೊಳಾಡಿಸುವ ಬಿರಿದ ಕುಮುದದ
ಮುತ್ತು ಸಕ್ಕಿತೆನೆ ಅರಳಿದ ಸುರಯಿಯು
ಕಂಪಿಸೆಲರ ಜತೆಗೂಡುವ ಗಾನಕೆ—ತೆರೆಯಿತೆನ್ನ ಮನವು

ಹರಿವ ಜಲದ ಕಣ್ಗೊಳುವ ಬನಂಗಳ
ಖಗದ ಮೃಗದ ಮುದದಿಂಪು ದನಿಗಳ
ಸೊಗವನೆಲ್ಲ ನಮ್ಮೆದೆಯ ಕುಹರದೊಳು
ತುಂಬಲೆಳಸುವೀ ಮೋಹನಗಾನಕೆ—ತೆರೆಯಿತೆನ್ನ ಮನವು

ಸುಸ್ವರದಿಂ ಕರಣವ ಪಟುಮಾಡಿ
ಮನವ ಹೊತ್ತಿಸುತ ಹೃದಯವ ಬೆಳಗಿ
ಇರವಿನೆಲ್ಲದರ ಚೆಲುವನಾತ್ಮದೊಳು
ಮೋದವುಜ್ಜ್ವಲಿಸೆ ಬೇಳುವ ಗಾನಕೆ—ತೆರೆಯಿತೆನ್ನ ಮನವು

ರಾಗ—ರೀತಿಗೌಳ

ಜೊನ್ನದೋಲ್ ಕಂಪಿನೋಲ್ ನೇಹದಂತೊಲುಮೆಯಂ-
ತೆದೆಯೆಲ್ಲ ಭಾವಗಳ ಹೊರಗಿನಂತೆ

ಸುರರಸುಜ್ಜ್ವಲಗೊಳಿಪ ಹವಿಯಂತೆ ಈ ಗಾನ
ಇದನುಲಿವ ಗೋಪಾಲನೆಂತಿರುವನೋ

(ತೆರೆಯಲ್ಲಿ ಗೋಪಿಯರು ಹಾಡುತ್ತಾರೆ.)

ಹಾಡು : ರಾಗ—ಕೇದಾರ

(ಕೊಳಲುಲಿವಾಲಿಪೆವೆಲ್ಲ—ಆದೊಡೆ
ಮುರಳೀಧರ ಕಾಣಲೊಲ್ಲ
ಎಲ್ಲಿಹನೀ ಗೋಪಬಾಲ—ಪೇಳಿ-
ರೆಲ್ಲಿಹನೀ ಮೋದಶೀಲ)

ಅಕ್ರೂರ

ಕೊಳಲಿನ ಮಾಯೆಗೆ ವಿಹ್ವಲರಾದೀ
ಗೋಪವಧೂನಿಕರಂ
ಕೃಷ್ಣನನರಸುತ ಮೈಮರೆ ಪೊರೆಯುತ
ಬರುತಿದೆ ಮರೆಗೈದುವುದೆ ತರಂ

(ಮರೆಗೆ ಹೋಗಿ ನಿಲ್ಲುತ್ತಾನೆ.)

(ಗೋಪಿಯರು ಹಾಡಿಕೊಂಡು ಗುಂಪುಗುಂಪಾಗಿ ಬರುತ್ತಾರೆ.)

ಗೋಪಿಯರು

ಕೊಳಲುಲಿವಾಲಿಪೆವೆಲ್ಲ—ಆದೊಡೆ
ಮುರಳೀಧರ ಕಾಣಲೊಲ್ಲ || ಪ ||
ಎಲ್ಲಿಹನೀ ಗೋಪಬಾಲ—ಪೇಳಿ-
ರೆಲ್ಲಿಹನೀ ಮೋದಶೀಲ || ಅ. ಪ ||

ಯಮುನೆಯ ಬನವೆಲ್ಲ ಹುಡುಕಿ—ಸಖಿಯರೆ
ದೆಸೆದೆಸೆಯಲೆದೆವು ಮಿಡುಕಿ
ತರುತರುವಡಿಯೊಳು ನೆಳಲು—ನಿಮ್ಮ ಶ್ಯಾಮ
ನಿಲ್ಲಿಹನೆಂದಣಕಿಸುತಿರಲು

ಕರೆವೆಡೆ ಹೊನ್ನೆ ಹೂಸೋನೆ—ಜುಮುತಟ್ಟಿ
ಜಲರುಹಶ್ಯಾಮನ ಸುಳಿವನೆ ಕಾಣೆ

(ಗೋಪಾಲಕರ ಗುಂಪು ಹಾಡುತ್ತಾ ಬರುತ್ತದೆ.)

## ಗೋಪಾಲಕರು

ಹಾಡು : ರಾಗ—ಆನಂದಭೈರವಿ

ಹರಿವೆಡೆ ಹಗುರಾಗಿ ಯಮುನೆ—ಮಳಲೊಳು
ಹರಿಯನರಸುತಲಾಯ್ತು ನಮಗೆ ಬರಿಬವಣೆ

### ಎಲ್ಲರೂ

ತರುಗಿಡಬಳ್ಳಿ ಬನವೆಲ್ಲಾ—ಕಿವಿ ಬಳಿ
ಪಿಸುಗುಟ್ಟುತಿವೆ ಗೋವಿಂದನ ಸೊಲ್ಲ
ಆದೊಡೆ ಕಂಗಳಿಗಿವ ಕಾಣಲೊಲ್ಲ—ಕಾಣೆ-
ವೆಲ್ಲವಿತಿಹನೋ ನಮ್ಮ ಗೊಲ್ಲ

ಇಗೊ ಇಲ್ಲೆ ಎನುವಂತೆ ಒಮ್ಮೆ—ಅಲ್ಲಲ್ಲ
ಬಗೆಯಲ್ಲೆ ಎನುವಂತೆ ಒಮ್ಮೆ
ದೂರಸಾರಿದನೇನೊ ಎನಲೊಮ್ಮೆ—ಪೇಳಿ
ಆವೆಡೆ ನಾನಿವನ ಕಾಣಲಪ್ಪೆ

ಅಗೊ ಬನ್ನಿ ಅಗೊ ಬನ್ನಿ ಮುರಳೀ—ಗೆಳೆಯರೆ
ಬಯಕೆವೇಗಕೆ ನಡೆ ತಗ್ಗದೆ ಇರಲಿ
ಮನ ಮುಂದೆ ತನು ಹಿಂದೆ ಎನದೆ—ಅವನೆಡೆ
ತನುಮನವೊಂದಾಗಿ ಧಾವಿಸುತಿರಲಿ

ಕೊಳಲುಲಿವಾಲಿಪೆವೆಲ್ಲ—ಆದೊಡೆ
ಮುರಳೀಧರ ಕಾಣಲೊಲ್ಲ

(ಗುಂಪು ಮರೆಯಾಗುತ್ತದೆ.)

### ಅಕ್ರೂರ

ರಾಗ—ಬಹುದಾರಿ

ಗೋಕುಲದೀ ಜನವೆಂತೀ ಗೋಪಾಲನಿಗೆ
ಹಂಬಲಿಸುತ ತೊಳಲುತ್ತಿದೆ ಎಂತಿವನ ಬಗೆ
ಕಾಣದೆಯೇ ಒಲಿದಿಹೆ ನಾ ಹಿಂಬಾಲಿಸಲೇ
ಅತ್ತಡೆಯಲ್ಲಿತ್ತೆಡೆ ಕೊಳಲಿಲ್ಲಿಯೆ ನಿಲಲೇ

(ಆಲಿಸಿ)

ಇರುಳ ದೀವಿಗೆಯಂತೆ ತನ್ನನೆ
ಮೆರಸಿಕೊಂಡೀ ಗಾನವು
ಸಸಿಯುಕ್ಕೈತಂದಂತೆ ಹೊಗರಿಂ
ನನ್ನ ಸುತ್ತನು ಬೆಳಗಿದೆ.

(ನೋಡಿ ಸಂತೋಷದಿಂದ)

ರಾಗ—ಮಲಯಮಾರುತ

ಅಗೊ ಮುರಳೀಧರನಾಹಾ
ಅಗೊ ಮುರಳೀಧರನಾಹಾ

ನಿಡುತೋಳೋ ಎದೆಹರಹೋ
ನಡೆಬೆಡಗೋ ನಿಲುಬಗೆಯೋ
ನಗುಮೊಗವೋ ತಹ ಸೊಗವೋ
ಕನಸಿಗು ಇಂಥವ ಸುಳಿವೊಲ್ಲ
ಊಹೆಗು ವಿಾರಿಹನಲ್ಲಾ
ಅಗೊ ಮುರಳೀಧರನಾಹಾ

ನರರಚ್ಚರಿಮಣಿ—ಸುರರು ಪರೀಕ್ಷಿಸೆ
ಜೊನ್ನದ ಪಾಲಿಸೊಳದ್ದಿರುವ
ಇಂದ್ರನೀಲವಿದೊ—ಆಹಾ—
ಅಗೊ ಮುರಳೀಧರನಾಹಾ

(ಬಲರಾಮುನನ್ನು ನೋಡಿ)

ಈತನು ಮೆಚ್ಚೋ ಆತನು ಮೆಚ್ಚೋ
ಮನ ಹೆಚ್ಚಾ ರೆಂದಚ್ಚರಿಗೊಳುತಿರೆ
ಹರೆಯ ಹಿಡಿದು ಕೊಳಲಿಗೆ ನಡೆಗೊಡುವಂ
ಉದಾರರೂಪಂ ಆವನಿವಂ
ಬಲರಾಮುನಲ್ಲದೇ ಆವನಿವಂ

ರಾಗ—ಸಾಮಾ

ಹರೆಯುದೆಳಹೊಗರಿಂದ ಕಳೆತೀವಿ ಇಹರು
ಸೆಳೆರೂಪಿನಿವರಿಗಾರೊಲಿಯದಿಹರು

ಜಸದಂತೆ ಇರುವಿವರ ಪರಿಪರಿಯಲಿ
ನಿರುಕಿಸುತಲೆನ್ನ ಬಗೆ ಬಳಕೆಗೊಳಲಿ

(ಮರೆಗೆ ನಿಲ್ಲುತ್ತಾನೆ.)

(ಕೃಷ್ಣ ಮುಂದೆ ರಾಮು ಹಿಂದೆ ಪ್ರವೇಶಿಸುತ್ತಾರೆ, ಗೋಪಬೃಂದ ಹೋದ ಇದಿರ ದಿಕ್ಕಿನಿಂದ.)

ಕೃಷ್ಣ

ಎನ್ನೀ ಕೊಳಲಿದು ಕಾಡಿನ ಬಿದಿರು
ಈ ಹುಲುಕಡ್ಡಿಗೆ ಎನಿತೋ ಚದುರು ?
ಇದರಿಂ ನಾನಪ್ಪೆನು ನಾದಮಯ
ಈ ಬೃಂದಾವನ ಆನಂದಮಯ
ಎನ್ನಿನಿತಾಸೆಗಳಿದರೊಳು ತೂರಿ
ನಾದದ ವೇಷದಿ ಕಿವಿಬಳಿ ತೋರಿ
ಮರಳಿ ಎದೆಗೈದೆ ಎನಿತಾಹ್ಲಾದ
ಬಯಕೆಯೇ ಸಲಿಕೆಯಪ್ಪ ವಿನೋದ
ಪ್ರಾಣತರಂಗಿತ ನಾದತರಂಗ
ನಾದತರಂಗಿತ ಪ್ರಾಣತರಂಗ
ನನಗೂ ನನ್ನಾಹ್ಲಾದಕು ನಡುವೆ
ಇಹುದೀ ಚದುರಿನ ಬಿದಿರಿನ ಕೊಳವೆ
ಎನಗೆನ್ನಾನಂದದ ಬಳಿತೋರೆ
ಸಹೃದಯವೀ ಜಗವೆಂಬುದ ಸಾರೆ

ಬಲರಾಮ

ಮೂಲೋಕವ ಗೆಲೆ ಸಾಕೀ ಸಾಧನ
ಎನ್ನಿಪುದೆನಗೀ ವೇಣುವಾದನ

ಕೃಷ್ಣ

ಮಗುವಳುತ್ತಲೂ ತಾಯಿ ಗೆಲುವುದು
ಏನಚ್ಚರಿ ನಾ ನಿಮ್ಮ ಗೆಲುವುದು
ಕೇಶಿಯನಿದಿರಿಸೆ ಕೊಳಲಿದು ಸಾಕೆ
ಕೇಡುಗರಿದಿರೊಳು ಹಾಡ ಪರಾಕೆ

ಬಲರಾಮ

ದಿಟದಿಟ ಅಸುಜ—ಧೇನುಕನಲ್ಲಿ
ನಿನ್ನೀ ತೆಳ್ಳನೆ ಬಿದಿರುಲಿವೆಲ್ಲಿ

ಕೃಷ್ಣ

ಒಲ್ಮೆಯ ನಲ್ಮೆಗೆ ಹಾಡಿನ ದಾನ
ವೈರ ರುಜೆಗೆ ತೋಳ್ಬಲವನುಪಾನ
ಮದಿಸಿದ್ದಾ ಕಾಳಿಂಗನ ಮಣಿಸೆ
ಕಾಲಿನ ತಾಳಕೆ ಹೆಡೆಗಳ ಕುಣಿಸೆ

(ತಟಕ್ಕನೆ ಕುಣಿಯುತ್ತಾನೆ.)

ರಾಗ—ಹಂಸಧ್ವನಿ

ಕುಣಿಯಲುಬೇಕೀ ಕುಣಿತವ
ತಲ್ಲಣಿಸಲು ಜನ ಏಗತಿ ಎನುತ
ರೆಂಬೆಯೇರಿ ನಾ ದಿಗಿಲಂ ನಗುತ
ಧುಮುಕಿ ತಲಕೆ ಕಲಕಿ ಮಡುವ ಪಾದಾ-
ಘಾತದಿಂದ ಸುಳಿಗಳ ಬಿಲವಾದಾ
ಹುತ್ತದಲ್ಲಿ ಕಾಳಿಂಗಸರ್ಪವಂ
ತುಡುಕಿ ಹೊಯ್ದಾಡಿ ಅವನ ದರ್ಪವಂ
ಮುರಿದು ವಿಷಕಾರೆ ಮನಕೆ ಭಯವೂರೆ
ಬಳಿಯ ಸತಿಯೊಳೆ ಹೆಡೆಯೇಳು ಜೋಲೆ
ಶರಣು ಶರಣು ಗೆಲು ಗೆಲ್ಲು ಭಾಪುರೇ
ಎಂಬ ಸೊಲ್ಲಿಗೆದೆ ಮುದದಿ ಮದಿಸಿರೇ
ಕುಣಿಯಲುಬೇಕಾ ಕುಣಿತವ.

ಬಲರಾಮ

ಪ್ರಲಂಬನಹಹಾ ನೆನೆದೊಡೆ ಸಾಕು
ಬಗೆ ಮುದದಿಂ ಕುಣಿವುದು ಥಕಥಾಕು—
ನಾನೂ ನಿಮ್ಮಂತೆಂದಾ ವೈರಿ
ನೇಹವ ತೋರಿ ಜತೆಯಂ ಸೇರಿ
ಆಟದಿ ಬೆರೆತು ಬೂಟಕೆ ಸೋತು
ಬೆನ್ನನೇರೆ ನಾ ಗೋಣಿಗೆ ಜೋತು

ದೂರಕೊಯ್ದು ಕಡುವೇಗದಿ ದುರುಳಂ
ಕೊಲ್ಲಲೆಳಸೆ ಮರೆತೆನ್ನಯ ಹುರುಳಂ
ತೊಡೆಯೊಳವುಕಿ ಕೊರಲ ಹಿಸುಕಿ ಕೈಯಿಂ
ನೆತ್ತಿಯೊಡೆಯೆ ಗುದ್ದಿಗುದ್ದಿ ಬಾಯಿಂ
ರಕ್ತದ ರಸ ಹಿಳಿಯೇ ದಮ್ಮಳಿಯೇ
ಹಾಹಾರವವೇಳೇ ತನು ಬೀಳೇ
ಬಿದ್ದನುಘೇ ಹೋ ಎನೆ ಜನ ಸುತ್ತ
ಪ್ರಲಂಬಗಿಳೆಯಾಲಿಂಗನವಿತ್ತ
ಕುಣಿಯಲುಬೇಕಾ ಕುಣಿತವ.

ಕೃಷ್ಣ

ರಾಗ—ಸಿಂಹೇಂದ್ರಮಧ್ಯಮ

ವಿಷಾದಮಾಯ್ತಗ್ರಜ ಬೀಳೆ ರಕ್ಕಸಂ
ಪ್ರತಾಪವಂತಂ ಕೆಳೆಗೀತ ತಕ್ಕವಂ
ಅಕಾರಣಂ ದ್ವೇಷಮದೇಕೆ ಲೋಗರೊಳ್
ಅಕಾರಣಂ ನೇಹಮಿದಲ್ತೆ ಸೋಜಿಗಂ

ರಾಗ—ತೋಡಿ

ಸ್ನೇಹಾಭಿಲಾಷಿ ಹೃದಯಂ ಜ್ವಲಿತಾರ್ಚಿಯಂದಂ
ಚೇತೋಭಿಗಾಮಿ ಸಕಲಾತ್ಮರಸಪ್ರವೃದ್ಧಂ
ಆನಂದಪಾವಕಸುದೀಪ್ತಮಿದಕ್ಕೆ ಸಲ್ಲು-
ತ್ತುದ್ದೀಪ್ತಿಯಂ ಪೊಗೆಯುನೈದುವರೈದುವಂದಂ

ಬಲರಾಮ

ರಾಗ—ಬೇಗಡೆ

ಒಲಿದವರೊಲಿಯಲಿ ಹಗೆತನ-
ಕೆಳಸುವರೆಳಸಲಿ ಮದಾಂಧರವರವರರಿವೊಲ್
ಇಳೆಯೊಳಗೇಪರಿಯಾಗಲಿ
ಬಿಲೆಕೊಡದವರಿಲ್ಲವೆಮಗೆ ಎಂದಾಸರಿವೆಂ

ಕುತ್ತಗಳಾರೋಗ್ಯಕ್ಕಾ-
ಪತ್ತುಗಳೈಶ್ವರ್ಯಜೀವಿತಕ್ಕರಿ ಮೈತ್ರಿ-

ಕ್ಶೈತ್ರಮ್ಯಕ್ಕಮಧಮರ್ ತಾ-
ವೃತ್ತೀಜನವೀವರಂತೆ ಸತ್ಪ್ರೋನ್ನತಿಯಂ

ಕೃಷ್ಣ

ರಾಗ—ನಾದನಾಮಕ್ರಿಯ

ನಾನೊಲಿವೆಂ ನಿಮ್ಮವನ್ಯೆ
ಏನುವನಾಂ ಬೇಡೆಸಯ್ಯ ನೀಡುವೆನೆನ್ನಂ
ಗಾನದಿ ಸಾರುವೆನಿದನಾಂ
ಜಾಣಿಂ ಕಿವಿಗೊಡುವ ಲೇಸು ಎಲ್ಲರಿಗಿಲ್ಲಂ

ಬಲರಾಮ

ರಾಗ—ಮಾಂಡ್

ಉಪ್ಪಿಗೆ ಪಾಲ್ ಮುನಿವುದು
ಸಕ್ಕರೆಗದು ಒಲಿವುದು
ಮನಮನದೊಲು ಬೆರೆವ ಗುಣ
ಬಲ್ಲವರಾರೀ ಹದನ

ಕೃಷ್ಣ

ಹಾಡು : ರಾಗ—ಕಾಪಿ

ಒಲುಮೆ ಹಗೆ ಎಂಥ ಬಗೆ
ಇದನೆನಗೆ ಪೇಳ್ವರಾರ್
ಇದನೆನಗೆ ಪೇಳ್ವರಾರ್

ಅರಿಯಲು ಹೂ ಬಲುಸರಳ
ಬಲ್ಲೆವೆ ಮುಳ್ಳಿನ ಹುರುಳ
ಒಂದೆ ತೊಟ್ಟು ಎರಡು ಹುಟ್ಟು
ಎಂಥ ಬಗೆ ಇದನೆನಗೆ
ಪೇಳ್ವರಾರ್—ಒಲುಮೆ ಹಗೆ

ಮೋಡದ ಕರುಳೊಳು ಕೂರ್ಪು
ಅಂಚೊಳಿಹುದು ಸಿಡಿಲಾರ್ಪು
ಒಂದೆ ಇರವು ಎರಡು ತೆರವು

ಎಂಥ ಬಗೆ ಇದನೆನಗೆ
ಪೇಳ್ವರಾರ್—ಒಲುಮೆ ಹಗೆ

(ಹೀಗೆ ಕುಣಿಯುತ್ತಿರುವಾಗ ಶ್ರೀದಾಮನೆಂಬ ಮಿತ್ರನೊಬ್ಬ ಈ ಕುಣಿತಕ್ಕೆ ತನ್ನೊಂ
ನುಡಿಯೊಡನೆ ಬಂದು ಸೇರಿಕೊಳ್ಳುತ್ತಾನೆ.)

ಶ್ರೀದಾಮ

ನಗೆಯೊಳಗೇನಿದೆ ತೊಡಕು
ಸರಳವೆ ಹುಬ್ಬಿನ ಸೆಡಕು
ಒಂದೆ ಪ್ರೀತಿ ಎರಡು ರೀತಿ
ಎಂಥ ಬಗೆ ಇದನೆನಗೆ
ಪೇಳ್ವರಾರ್—ಒಲುಮೆ ಹಗೆ

ಮೂವರೂ

ಒಂದೆ ಪ್ರೀತಿ ಎರಡು ರೀತಿ
ಎಂಥ ಬಗೆ ಇದನೆಮಗೆ
ಪೇಳ್ವರಾರ್ ಪೇಳ್ವರಾರ್
ಪೇಳ್ವರಾರ್—ಒಲುಮೆ ಹಗೆ

ಬಲರಾಮ

ಪೋ ಪೋ ಪೋ ಪೇಳುವರ್
ಕಣ್ಣೊಳು ನಿನ್ನಾಳುವವರ್

ಕೃಷ್ಣ

ಬಾ ಬಾ ಬಾ ನೀನೂ ಬಾ
ನನಗೆ ಹರೆಯ ಮೋದು ಬಾ

ಶ್ರೀದಾಮ

ಬನ್ನಿ—ಕೃಷ್ಣ ಬೇಗ ಬಾ

ಬಲರಾಮ

ಪೋ ಪೋ ಪೋ ಪೋಗು ನೀ
ಕಾದಿರುವರು ಕಾಮಿನೀ
ಹೆಣ್ಣು ಹಂಬಲೆನಗಿಲ್ಲ

ನಾಚುವರೆನ್ನಿದಿರೆಲ್ಲ
ಗಂಡುಕೂಡೆ ನನ್ನಾಟ
ನಿನಗಿರಲ್ಕೈ ಈ ಬೇಟ
ಕೃಷ್ಣಾ ಪೋಗು ನೀ

(ಬಲರಾಮ ಹೋಗುತ್ತಾನೆ.)

ಕೃಷ್ಣ

(ಶ್ರೀದಾಮನಿಗೆ)

ಎನ್ನ ಚೆನ್ನೆ ಬಂದಿಹಳೆ?

ಶ್ರೀದಾಮ

(ಕೊಂಕಿನ ಸಂದೆಗದಿಂದ)

ಕಂಡೆನೆ ನಾ—ಬಂದಿಹಳೆ

ಕೃಷ್ಣ

ಪೋ ಪೋ ಪೋ ಪೋ ಪೋರ

ಶ್ರೀದಾಮ

(ಹೆಣ್ಣಿಹಾಗೆ ಅಭಿನಯಿಸುತ್ತಾ)

ಬಾ ಬಾ ಬಾ ಬಾ ನೀರ

(ಎಂದು ಮರೆಯಾಗುತ್ತಾನೆ.)

ಕೃಷ್ಣ

ಥಳಿಸುವ ಪ್ರೇಮದ ಮಿಂಚೊಳಗಾಗಿರೆ
ಮೋಹರಿಸುವ ಮೋಹದ ಮನದಿಂ
ಬಿರುವೆಲರನು ಕರಿಮೋಡದ ತೆರದೊಳು
ಹಿಂಬಾಲಿಪೆನೀತನ ಜವದಿಂ

(ಹೊರಡುವನು.)

ಅಕ್ರೂರ

(ಕಾಣಿಸಿಕೊಂಡು)

ರಾಗ—ಧನ್ಯಾಸಿ

ನೂರು ಬಣ್ಣದ ಹೊಳಪನೊಳಗಾಂತು ಇದರ ತೆರ-
ವಿಂಥದೆನೆ ಮತ್ತೊಂದು ಥಾಳಿನಿಂದ
ಕಂಗಳನು ಕೋರೈಸುವಚ್ಚರಿಯ ಹೀರದಂ-
ತಿವನ ಬಗೆಗೆನ್ನ ಬಗೆಯಚ್ಚರಿಪುದು

ರಾಗ—ಹಿಂದೋಳ

ಕೃಷ್ಣೋಜ್ಜ್ವಲಂ ಕೃಷ್ಣನಮೇಯಮಾನಸಂ
ಲೋಕಪ್ರಿಯಂ ಧೀರಸನಾತ್ಮಬಾಧಕಂ
ಸದ್ಭಾವಸಂಪುಷ್ಟನನಿಂದ್ಯನೀತಸಂ
ಬಾಸಿಂದ ಭಾಗೀರಥಿಯಂದವೊಯ್ವನಾಂ

ರಾಗ—ರಾಮಪ್ರಿಯ

ಗೋಕುಲದಾಟಕೆ ಕುಣಿತದ ಕೂಟಕೆ
ಹೆಂಗಳ ನೋಟಕೆ ಒಲಿದೀತಂ
ಮಧುರೆಗೆ ಬಾ ಎನೆ ದೊರೆಯಾಣತಿಯಿಂ
ಧಿಕ್ಕರಿಸುತ ನಗಲೇಗೆಯ್ವಿಂ

ಸರಳನಮಿತೋತ್ಸಾಹಿ ರಾಮುಂ
ಮೊದಲು ಕಾಣುವೆನಾತನಂ
ಬಿಲ್ಲಹಬ್ಬವ ಬಣ್ಣಿಸುವೆ ನಾ
ಹುರುಪುಗೊಳಿಸುವ ಮಾತಿನಿಂ

(ಹೊರಡುವನು. ಒಳತೆರೆ ಬೀಳುತ್ತದೆ.)

# ವೇಣುವಿಸರ್ಜನ

(ಕವಿ ಪ್ರವೇಶಿಸಿ ಹಾಡುತ್ತಾನೆ.)

ಕವಿ

ಹಾಡು : ರಾಗ—ನಾಟಿ

ಶರಣೆನುವೆಂ ಶರಣೆನುವೆಂ
ಬೃಂದಾವನಚರಚರಣಕೆ ನಾಂ

ಮುಗಿಲೊಳು ಮರೆದಿರೆ ಸುಂದರವದನವು
ಮಂದಸ್ಮಿತವೆಳಮಿಂಚಿನೊಳು
ದೆಸೆಯೊಳು ತನು ತಾರಗೆಯೊಳು ಮುಕ್ತಾ-
ಹಾರಸುಮಾವಳಿ ಬೆರೆದಿರಲು
ಮನದ ನೆಲದಿ ಚಂಚಲಿಸುತ ಚಲಚಲ
ಘಲುಘಲ್ಲೆನುವೀ ಚರಣಕೆ ನಾಂ
ಶರಣೆನುವೆಂ ಶರಣೆನುವೆಂ
ಬೃಂದಾವನಚರಚರಣಕೆ ನಾಂ

ಮುಡಿಯ ನವಿಲುಗರಿ ಚಂದ್ರಮಗಾಗಿರೆ
ಶುಕ್ಲಾಂಬರ ಜೊನ್ನಕೆ ಸಲಲು
ಇರುಳ ಮೌನದೊಳು ಹೊಳೆಬನಗಾಳಿಯು
ಬಗೆಬಗೆ ದನಿಯೊಳು ನಿಲೆ ಕೊಳಲು
ಮನದಿ ಮಾತ್ರ ಸ್ಫುಟವಾಗುತ ಪುಟಪುಟ
ಪುಟಿದು ಕುಣಿಯುವೀ ಚರಣಕೆ ನಾಂ
ಶರಣೆನುವೆಂ ಶರಣೆನುವೆಂ
ಬೃಂದಾವನಚರಚರಣಕೆ ನಾಂ

ಸೊರಗಲು ಮನ ಜಡವಾಗಲು ತನು ಪದ-
ಘಾತಕೆ ಎದೆ ಮೃದುವಾಗುತಿರೆ
ಮುದವು ಹಿಳಿದು ಮಡುವಾಗಿರೆ ಬಾಳೊಳು

ನಾನಾ ಎಂಬಲೆಯುಳಿಯುತಿರೆ
ಮೆಲ್ಲಲರೊಳು ಸರಸೀರುಹದಂದದಿ
ಧ್ಯಾನದಿ ಚಲಿಸುವ ಚರಣಕೆ ನಾಂ
ಶರಣೆನುವೆಂ ಶರಣೆನುವೆಂ
ಬೃಂದಾವನಚರಚರಣಕೆ ನಾಂ

(ಮರೆಯಾಗುತ್ತಾನೆ.)

(ತೆರೆ ಎದ್ದು ರಾಧೆಯನ್ನೂ ಸಖಿ ನಾಗವೇಣಿಯನ್ನೂ ತೋರುತ್ತದೆ.)

ರಾಧೆ

ಹಾಡು : ರಾಗ—ಕಾನಡ

ಬರುತಿಹನೇ ನೋಡೆ ವಾರಿಜಲೋಚನ || ಪ ||
ಬರುವನೆ ಇತ್ತೆಡೆ ಪೇಳು ನನ್ನಾಣೆ || ಅ. ಪ ||

ಕೊರಲಿನ ತುಲಸೀಮಾಲೆಯ ಮೇಲೆ
ಬೀಸಿ ಬಂದಂತಿರುವೆಲರನು ಕೇಳೆ
ಸಿಂಗದ ತೆರ ನಡೆ ನಡೆವ ಗಂಭೀರನ
ದೋತರದುಲಿವೋ ಎಲೆಯುಲಿವೋ ಹೇಳೆ—ಬರುತಿಹನೇ

ನಡುವಿನ ಉಡಿದಾರ ಘುಲುಘುಲುಕೆಂದುದೆ
ಸನಿಯದ ಪೊದರೆಡೆ ಈ ದನಿ ಯಾವುದೆ
ಮರೆಯದೆ ಬಹನೋ ನೆನೆಯದೆ ನಿಲುವನೊ
ಬಗೆಬಗೆಯಳುಕೊಳು ಮಿಡುಕುತಿಹುದೆ ಮನ—ಬರುತಿಹನೇ

(ಅತ್ತೆಡೆ ಕೃಷ್ಣ ಮಿತ್ರನೊಡನೆ ಪ್ರವೇಶಿಸುತ್ತಾನೆ.)

ಕೃಷ್ಣ

ಚಂದ್ರ ಮೂಡಲೆಚ್ಚರುವ ಕುಮುದಿನಿ
ಬೀಸುಗಾಳಿಯೊಳಗಲೆಯುವ ತೆರದೊಳು
ಎನ್ನ ಬಯಕೆ ಬಿರುವೆಲರೊಳು ಭಾಮಿನಿ
ಮನವಲೆವೊಲು ಮೈ ಬಳಲಿಸುತಿರುವಳು
ಕೆಳೆಯನೆ ನೋಡಮೊ ವಾರಿಜಲೋಚನೆ
ಹಳುವೊಳೆನಗೆ ಹಂಬಲಿಸುವ ಪರಿಯ

ರಾಧೆ

(ಇತ್ತಡೆ)

ಬಂದನೆ ಗೆಳತಿ ಬಂದರೇನೆ ಗತಿ
ನಿಂದರೇಗೆಯ್ವೆ ಸನಿಯದೊಳಿಸಿಯುಂ
ಬಂದು ನಿಂದು ರಾಧೇ ಎನಲೇಪರಿ
ದುಮುದುಮು ದುಡಿಯುವ ಹೃದಯವ ತಡೆವೆನೆ—ಬರುತಿಹನೇ

ಶ್ರೀದಾಮ

(ಅತ್ತಡೆ)

ಕಂಪಿನ ಬಳಿವಿಡಿದಲರನು ಸೇರುವ
ದುಂಬಿಯಂತೆ ಸಖ ಇನಿಯರ ಕಂಡೆವು
ನಾಗವೇಣಿ ಓ ಓ ನಾಗವೇಣಿ
ಗೆಳತಿಯು ಗೆಳೆಯುಗೆ ಬಿಡು ಸನಗೋಗೊಡು
ಬಂದನಿಗೋ ಸಖಿ ವಾರಿಜಲೋಚನ
ಬೃಂದಾವನದೊಳು ಇನಿಯಳನರಸಿ—

ನಾಗವೇಣಿ

(ಇತ್ತ)

ಅಗೊ ಅಗೋ ರಾಧೇ—

ರಾಧೆ

ಏನಾರೆಲ್ಲಿಯೆ

ನಾಗವೇಣಿ

ಉದಯದೊಳಿಸನೆಲ್ಲೆಂಬರೆ—ಕಣ್ತೆರೆ

ರಾಧೆ

ನಿಲ್ಲು ಗೆಳತಿ ತುಸ ನಿಲ್ಲು ಗೆಳತಿ ಓ—

ನಾಗವೇಣಿ

ಅಂಜಲೇಕೆ ಸಖಿ—ಅನ್ಯನೆ ನಿನಗೆ

ಶ್ರೀದಾಮ ಮತ್ತು ನಾಗವೇಣಿ

(ಹೋಗುತ್ತಾ)

ಬಂದನಿಗೋ ಸಖಿ ವಾರಿಜಲೋಚನ
ಬೃಂದಾವನದೊಳು ನಿನ್ನನೆ ಅರಸಿ

(ಹೋಗುತ್ತಾರೆ.)

ರಾಧೆ

ರಾಗ—ಅಸಾವೇರಿ

ಬಯಕೆಯೊಳೇ ಬಾಳ್ ಕಳೆವುದು ಬಯಕೆಯು ದೊರೆತ ಚಣ
ಬಯಸಿಕೆಯನೆ ಬಯಸುವ ತೆರವೇಕಹುದೆನ್ನ ಮನ
ತಪಿಸಿತಹಾ ಬಹ ವರೆಗೂ ತೊಟ್ಟನೆ ಉಳಿವಂತೆ
ಇನ ಬಂದರೆ ಮುಗಿವೀ ಎದೆ ಏನಿದರ ಅಹಂತೆ

ಕೃಷ್ಣ

ಸಖಿ ರಾಧೇ ನಾಣಂ ತೊರೆ ನೋಟದೊಳಾದರಿಸು
ಸವಿದನಿಯಿಂದಿನಿಯಾ ಎಂದೆನ್ನೆದೆಯಾವರಿಸು
ಕ್ರೂರನೆ ನಾ ಕಾಮಿಯೆ ನಾ ಏಕಿಹೆ ಅಂಜಿದೊಲು
ಬೇಡನ ಕೈಯಿಂ ಬಿಡುಗಡೆಗೆಳಸುವ ಹಕ್ಕಿಯೊಲು

ರಾಧೆ

ನೆನೆದಂತಿಹೆ ದೂರದೊಳಿರೆ ಊಹೆಗೆ ನೀ ಮೇರೆ
ಸನಿಯದೊಳೆಂತೋ ಅರಿಯೆನು ಈ ಬಗೆಯೇ ಬೇರೆ
ಇಬ್ಬರಿಗೂ ಮೈಯುಂಟೆಂದೊಲವೊಪ್ಪುವ ತನಕ
ಭ್ರಮಿಸುವೆನಾಸೆಯ ಬೆಂಬಲ ಪ್ರೇಮಕೆ ದೊರೆವನಕ

ಕೃಷ್ಣ

ಸುತ್ತಿನ ದಳದಂದದಿ ನಾ—ಕಂಪಂದದಿ ನೀನು
ಕಿರಣದ ತೆರ ನಾನಾಗಲು ಕಾಂತಿಯ ತೆರ ನೀನು
ಕೊಳಲ ಸರದಿ ಮಸ್ಮಸದೊಲು ಕಿವಿಯೊಳು ದನಿಯಂತೆ
ಬಿಂಕವನುಳಿದೊಲುಮೆಗೆ ಸಲು ನನ್ನೊಳು ನೀ ಕಾಂತೆ

ರಾಧೆ

(ಮುಖವೆತ್ತಿ ನೋಡುತ್ತಾ ಬೆರಗಿನ ಭಾವದಿಂದ)

ಸುಂದರ ನಾ ನೆನೆಯುತಲಿರೆ ಪರಿಯರಿವೆನು ನಿನ್ನ
ಬಳಿಯೊಳು ನೋಡುತ ನೋಡುತ ಬಳಿಯುಳಿವೆನು ನನ್ನ
ನುಡಿಯಲು ಮನ ಸೋಕಲು ಮೈ ನೋಡುತ ಸಗಲಿರವು
ನೀನುಂಟೆನೆ ನಾನಿಲ್ಲೆನೆ ಎನಗಹುದುಳಿವಳಿವು

ಕೃಷ್ಣ

ಹಾಡು : ರಾಗ—ಸಾಮ

ನನ್ನೊಳು ನಾ ನಿನ್ನೊಳು ನೀ
ಒಲಿವ ಮುಂತಿಂತೆ ನಾ ನೀ
ನಿನ್ನೊಳು ನಾ ನನ್ನೊಳು ನೀ
ಒಲಿದಮೇಲಿಂತೆ ನಾನೀ
ಇದೆ ಒಲವಿನ ಸರಿಗಮಪದನೀ

ಒಲಿವ ಮುನ್ನ ಜಗಕೆಲ್ಲಕು ನಾ
ಒಲಿದ ಮೇಲೆ ಜಗಕೆಲ್ಲಕು ನೀ
ಹಿನ್ನೆಲೆ ನಾ ಮುನ್ನೆಲೆ ನೀ
ಒಲಿದ ಮೇಲಿಂತೆ ನಾನೀ—ಇದೆ

ಚೆಲುವು ಮುನ್ನ ಹೊಳಲಿಟ್ಟಿತು ನನ್ನ
ಇಂದು ಚೆಲುವು ಹೊಳಲಿಡುವುದು ನಿನ್ನ
ಬಯಕೆ ನಾ ಸಲಿಕೆ ನೀ
ಒಲಿದ ಮೇಲಿಂತೆ ನಾನೀ—ಇದೆ

ರಾಧೆ

ಹಾಡು : ರಾಗ—ಹಿಂದುಸ್ತಾನಿ ತೋಡಿ

'ಮುಟ್ಟಿಕೊಂಡರೂ ದೂರದೊಳಿಹನು
ಕಟ್ಟಿ ನಿಂದರೂ ಬಿಟ್ಟಿಹನಿವನು'
ಇಂತದೇಕೊ ಸದಯ—ಹೃದಯ
ಶಂಕೆಗೊಂಬುದಿನಿಯ

ಬಿಸಿಲುಕೋಲು ಕೈಗೈತರುವಂತೆ
ನಿನ್ನ ರೂಪವೆನಗೆಟಕಿಹುದಿಂತೆ
ಎನುತದೇಕೊ ಹೃದಯ—ಸದಯ
ಶಂಕೆಗೊಂಬುದಿನಿಯ

ನಲಿವೊಲು ಹನಿ ತಾವರೆಯೆಲೆಯೊಳಗೆ
ನಿನ್ನೊಲವಾಡುವುದೆನ್ನೆದೆಯೊಳಗೆ
ಎಂದದೇಕೊ ಸದಯ—ಹೃದಯ
ಶಂಕೆಗೊಂಬುದಿನಿಯ

ಅರಿಯೆ ಅರಿಯೆ ಹರಿ ಎನ್ನೀ ಪರಿಯ
'ಮರುಳ ಹೆಣ್ಣೆ ಬಿಡು ನಿನಗಿವ ದೊರೆಯ'
ಇಂತೇಕೊ ಕಾಣೆ ಹೃದಯ—ಸದಯ
ಶಂಕೆಗೊಂಬುದಿನಿಯ

ಕೃಷ್ಣ

ಎಂದುಮಿಲ್ಲದೀ ಸಂದೆಗವೇಕೆ
ಪ್ರಿಯೆ ಬಾ ಬಾ ನೆಡು ಪ್ರೇಮಪತಾಕೆ
ಮನದೊಳೆನ್ನ ಹೆಣ್ಣೆ—ಚೆನ್ನೆ
ಶಂಕೆ ಸೋತಿತೆನ್ನೆ

ಕಂಪುಗೂಡಿದೀ ತಂಪಿನ ಇರುಳು
ತರವಾಗಿದೆ ಒಲವೊಳು ಕರಗಿರಲು
ನಂಬಿ ಬಾರೆದೆಯ ಕಣ್ಣೆ—ಚೆನ್ನೆ
ಶಂಕೆ ಸೋತಿತೆನ್ನೆ

ಮುಗಿಲು-ಮಿಂಚಂತೆ ಶಿವ-ಶಿವೆಯಂತೆ
ಕೂಡುವ ಬಾರೌ ದಿಟ-ಚೆಲುವಂತೆ
ಲೋಕ ಚೆನ್ನು ಎನ್ನೆ—ಚೆನ್ನೆ
ಶಂಕೆ ಸೋತಿತೆನ್ನೆ

ನಾಳೆಗೆಂತೆಂದು ಇಂದನು ತೊರೆಯೆ
ಸೂಸಿ ಬಂದ ಸೊಗವಾರಲು ಸರಿಯೆ

ಇಂದೆ ಎಂದೆಂದು ಎನ್ನೆ—ಚೆನ್ನೆ
ಶಂಕೆ ಸೋತಿತೆನ್ನೆ

ರಾಧೆ

(ಕೃಷ್ಣವಶಳಾಗಿ)

ಹಾಡು: ರಾಗ—ನಾಟಕುರಂಜಿ

ಆಡು ಬಾ ಮುದವೂಡು ಬಾ ಭಯದೂಡು ಬಾ ಒಲವೇ
ಕಾರಮುಗಿಲ ಚೆಲುವಾ ವನಮಾಲೀ
ಜಗನ್ಮೋಹನಾ ನುತಗುಣಶಾಲೀ
ಒಡನಾಡು ಬಾ ಭಯದೂಡು ಬಾ ಮುದನೀಡು ಬಾ ಒಲವೇ

ಇರುಳು ಜೊನ್ನದೊಲು ನಾವೊಲಿದಿರುವ
ಪ್ರಾಣದೇಹದಂತಗಲದೆ ಇರುವ
ಜಗದೊಡಲು ನುಡಿಯಿಡಲು
ನಾನೆ ನಲ್ಲೆ ನೀನೆ ನಲ್ಲನೆನೆ ಆಡು ಬಾ—

ಚಿಮ್ಮಲಿ ಸೊಗವೆಮ್ಮಿಂ ಜಗಕೆಲ್ಲ
ಬೆಳಗಲಿ ನಮ್ಮೊಲವಿಂ ಮನವೆಲ್ಲ
ನಲಿದು ತಿರೆ—ಉಲಿಯುತಿರೆ
ನಾನೆ ಚೆನ್ನಿ ನೀನೆ ನನ್ನಿ ಎನುತಾಡು ಬಾ—

ಶಂಕೆಯಳಿದೆ ಬಾ ಮೇಘಸುಂದರ
ಬಿಂಕವಳಿದೆ ಬಾ ಹೃದಯಮಂದಿರ
ಅಂಕೆ ಆತಂಕ ತುಸವು ಇಲ್ಲದೊಲು
ಕೊಂಕನುಳಿದು ನೀ ಶಂಕರನೆಂಬೆನೊ—ಆಡು ಬಾ—

ನೀಲಮೇಘಸುಂದರ ವನಮಾಲೀ
ಜಗನ್ಮೋಹನಾ ಶುಭಗುಣಶಾಲೀ—ಒಡನಾಡು ಬಾ—

ಕೃಷ್ಣ

ರಾಗ—ಕೇದಾರಗೌಳ

ಕರಣ ಮನವನು ಮನವು ಬುದ್ಧಿಯ
ಬುದ್ಧಿ ಹೃದಯವ ಹೃದಯ ಮಮತೆಯನು

ಮಮತೆ ಪ್ರಾಣವ ಮುಂಚಿ ಹರಿದುವೊ
ಎನ್ನಲೇಪರಿಯಾಯ್ತು ಸೊಗಮೆನಗೆ—

ಹಾಡು: ರಾಗ—ಕಲ್ಯಾಣಿ

ಎದೆಗೆ ಬರುತಿದೆ ಜಗದ ಮುದ
ಕುಣಿದಲ್ಲದೆ ನಾ ತಾಳೆನಿದ || ಪ ||
ಹಾಡಿಯಾಡಿ ಕುಣಿದಾಡಿಯಲ್ಲದೆ
ತಾಳಬಲ್ಲೆನೇ ಇಂಥ ಮುದ || ಅ. ಪ ||

ಬಾಳು ಬಂದಿತೆನೆ ಹರಕೆ ಸಂದಿತೆನೆ
ಬಯಕೆಯ ಮರ ಫಲ ಬಿಟ್ಟಿತೆನೆ
ಆತ್ಮರಸಕೆ ರುಚಿಯೂರಿತು ಇಂತೆನೆ
ರಾಧೆ ನೀನಿಂತು ಬಾಳಿಗೆ ಬಂದಿರೆ—ಎದೆಗೆ ಬರುತಿದೆ

ಹರುಷದೊಳುಬ್ಬುತ ಹಬ್ಬಿರುವೆನ್ನಯ
ಜಟೆಯೆನೆ ಮರದೊಳು ಚಂದ್ರಮ ತಂಗಿರೆ
ಗಿರಿಜೆಯಂತೆ ನೀ ಬಳಿಯೊಳೆ ನಿಂದಿರೆ
ಶಿವನ ಸುಮ್ಮಾನವಾಗಿದೆ ನನಗೆ—ಎದೆಗೆ ಬರುತಿದೆ

ತೆಂಗು ತೂಗುವೊಲು ಕೌಂಗು ಬಾಗುವೊಲು
ಅಂಗವಾಡಿಸುತ ಸನ್ನೆಗೈವ ಬಾ
ತುಂಬಿ ಬರುತಿಹಾನಂದ ಮುಂದಾಗಿ
ತಿರೆಯ ನೆರೆಯಲಿದೆ ಇದೆ ಇದೆ ಬಳಿಯೆನೆ
ನೆರೆದು ಬರುತಿದೆ ಜಗದ ಮುದ
ಕುಣಿದಲ್ಲದೆ ನಾ ತಾಳೆನಿದ—

(ರಾಧಾಕೃಷ್ಣರ ನೃತ್ಯ ಆನಂದೋನ್ಮಾದದಲ್ಲಿ ಸಾಗುತ್ತಿರುವಾಗ ಅರಸುತ್ತಿದ್ದ ಗೋಪಿಕಾ ಬೃಂದವು ನಾಗವೇಣಿ ಮುಂದಾಗಿ ಕ್ರಮೇಣ ನೆರೆದು ರಾಸಕ್ರೀಡೆಗೆ ಆರಂಭವಾಗುತ್ತದೆ.)

ನಾಗವೇಣಿ

ಹಾಡು: ರಾಗ—ಪೂರ್ವೀಕಲ್ಯಾಣಿ

ಅಕ್ಕೊ ಶ್ಯಾಮ ಅವಳೆ ರಾಧೆ ನಲಿಯುತಿಹರು ಕಾಣಿರೇ || ಪ ||
ನಾವೇ ರಾಧೆ ಅವನೆ ಶ್ಯಾಮ ಬೇರೆ ಬಗೆಯ ಮಾಣರೇ—|| ಅ. ಪ ||

## ಎಲ್ಲ ಗೋಪಿಯರು

ಕಲರವದೊಳು ಯಮುನೆ ಹರಿಯೆ
ಸೋಬಾನೆಯ ತರುಗಳುಲಿಯೆ
ತೆರೆದೆದೆಯೊಳು ಹರಸಿದಂತೆ
ಬಾನಿಂ ಜೊನ್ನ ಭೂಮಿಗಿಳಿಯೆ—ಅಕ್ಕೊ ಶ್ಯಾಮ

ಕಂಪ ಬಿಡುವ ದಳಗಳಂತೆ
ಸುತ್ತಲರಳಿಕೊಳ್ಳಿರೇ
ಒಲುಮೆಗಿಡುವ ಪ್ರಭಾವಳಿಯು
ತೆರದಿ ಬಳಸಿ ನಿಲ್ಲಿರೇ—ಅಕ್ಕೊ ಶ್ಯಾಮ

ಕಡಗ ಕಂಕಣ ಕಿಣಿಕಿಣಿಯೆನೆ
ಅಡಿಗೆ ಇರುಳೆ ಝಣರೆನೆ
ಎದೆನುಡಿತಕೆ ಚುಕ್ಕಿ ಮಿಡಿಯೆ
ಕೊಳಲನೂದಿ ಕುಣಿವನೆ—ಅಕ್ಕೊ ಶ್ಯಾಮ

ನಮ್ಮ ಮನವ ಕೋದು ಮಾಲೆ-
ಗೈದು ಮುಡಿಯುತಿಹನೆನೆ
ಮಾಧವನೂದುವ ಮಧುರ ಗಾನ
ಎದೆಯ ಹಾಯ್ವುದಾ ಎನೆ—ಅಕ್ಕೊ ಶ್ಯಾಮ

ನೋಡಿ ತಣಿಯೆ ಹಾಡಿ ತಣಿಯೆ
ಲೇಸನಾಡಿ ತಣಿಯೆನೇ—
ಕುಣಿದು ತಣಿಯೆ ದಣಿದೂ ತಣಿಯೆ
ತಣಿವಿಲ್ಲದೆ ನಲಿವೆನೇ—ಅಕ್ಕೊ ಶ್ಯಾಮ

## ನಾಗವೇಣಿ

### ರಾಗ—ಮುಖಾರಿ

ಸುಗ್ಗಿ ಬರೆ ಬನ ಥಟ್ಟನೊಟ್ಟುಹೂ ಬಿಡುವಂತೆ
ಹಿರಿತೇಜ ಕಿಡಿಗರಿಯ ಕೆದರುತಿರುವಂತೆ
ರಾಧೆ ಶ್ಯಾಮರು ಕೂಡೆ ಉಕ್ಕುವೀ ಉತ್ಕರ್ಷ
ಕೋಡಿಗೊಂಡಿತೊ ನಮ್ಮೊಳೆನೆ ನಲ್ಮೆಯಾಯ್ತು

ರಾಧೆ

ರಾಗ—ಭೈರವಿ

ಹಿಗ್ಗಿದೆ ಮನ—ತಗ್ಗಿದೆ ನಾಣ್
ಎದ್ದಿದೆ ಜಾಣ್—ಸ್ವಾಗತ ನಿಮಗೆ
ಎಂದಿನಂತೆ ಇಲ್ಲೀ ದಿನ
ಎನಗೊಬ್ಬಳಿಗಲ್ಲಿವನಿನ
ದೈವಂ ನಮಗೆ

(ರಾಸಪೂಜಾನೃತ್ಯ ಮೊದಲಾಗುತ್ತದೆ.)

ರಾಧೆ

ಹಾಡು: ರಾಗ—ಭೈರವಿ

ನಂದನಂದನಾ—ಗೆಲ್ಲು
ಗೋಕುಲಾನಂದನಾ— || ಪ ||
ಬೃಂದಾವನದೊಳು ನಮ್ಮನು
ಚಿರಮಿಂತೆಯೆ ನಲಿನಲಿಸುತ— || ಅ. ಪ ||

ಬೆಳಕು ಬೆಳಕು ಕೂಡುತೊಂದೆ
ಪ್ರಭೆಯಾಗುವ ತೆರದಿ ಬೆರೆದು
ಸಖಿಯರೊಡನೆ ನಾನೆತ್ತುವ
ಅರ್ತಿಯಾರತಿಯನು ಕೊಂಡು
ನಂದನಂದನಾ—ಗೆಲ್ಲು
ಗೋಕುಲಾನಂದನಾ

ಎಲ್ಲ ಗೋಪಿಯರು

ರಾಗ—ಶಾಹನ

ಒಡಲೊಳಿಟ್ಟ ನೇಹದಂತೆ
ಮುಡಿದು ಮಾಸಲಾದ ಸುಮದ
ಮಾಲೆಗಳನೆ ನಿನಗೊಪ್ಪಿಸೆ
ತಂದಿರುವೆವು ಮುಡಿಯೈ ಇವ—ನಂದನಂದನಾ

ರಾಗ—ಕಲ್ಯಾಣಿ

ಆತುರ ಕೆಂಡವೆನೆ ಆಸೆಯೆ ಅಗಿಲೆನ್ನೆ
ನಿನ್ನನು ಕಾಂಬೀ
ನಲವೇ ಗಂಧವೆನೆ ನಲಿವೇ ಪೂಜೆಯೆನೆ
ನಿನ್ನೆಡೆ ಹರಿವೀ
ನರುಗಂಪಿನ ನವ್ಮೊಲವಿನ ಧೂಪಾರತಿ ಸ್ವೀಕರಿಸುತ
ಹಾಲ್ಗಡಲೊಳು ಹರಿಯಂದದಿ ಎಂದುಮಿಂತೆ ನಲಿನಲಿದಿರು—
ನಂದನಂದನಾ

ರಾಗ—ಅಠಾಣ

ಹಿತ್ತಿಲ ಸೀಬೆ ಗಿಣಿ ಕಚ್ಚಿದ ದಾಳಿಂಬೆ
ಅತ್ತೆ ಕಂಡರಬ್ಬ ಎನುವ ಬಾಳೆ ಸೀನಿಂಬೆ
ನಿನ್ನನೆ ನೆನೆಯುತ ಕಡೆದೀ ಸಂಜೆಯ ನವನೀತ
ಮರೆಸಿ ಕರಿದ ಕಜ್ಜಾಯಗಳಿವೆ ಕೋ ನಿನಗೆನುತ
ಅಕ್ಕರೆಯೀ ನೈವೇದ್ಯಗಳೆಲ್ಲವ ನೀನೊಪ್ಪಿಸಿಕೊಂ-
ಡೆಮ್ಮ ಮನದ ಹಸಿವೆಯೆಲ್ಲ ಹಿಂಗಿಹೋಗುವಂತೆ ಹರಸು—
ನಂದನಂದನಾ

(ಗೋಪಾಲಕರು ಬಂದು ನೆರೆದುಕೊಳ್ಳುತ್ತಾರೆ.)

## ಗೋಪಾಲಕರು

ರಾಗ—ಮೋಹನ

ಹಾಹೂಹಾ ಹಾಹೂಹಾ ಅಹಹಹಾ ಹೂ
ಊಹಾ ಊಹಾ ಉಹುಹುಹ್ಹಾ ಹೂ
ನಾಚುವರೆಮ್ಮಗ್ಗಡಣೆಗೆ ಹಾಹಾ ಹೂಹೂ
ಅರ್ಥದ ಸಂಗವನುಳಿದಿಹ ನುಡಿಯಲ್ಲವೆ ಬಹಳ ಚೆನ್ನ
ಆಸೆ ಭಯಗಳಿಲ್ಲದೊಲುಮೆಲಲ್ಲೆಯಲ್ಲೆ ನುತಿಸೆ ನಿನ್ನ—
ನಂದನಂದನಾ

ರಾಗ—ಮಧ್ಯಮಾವತಿ

ತುತ್ತೂರಿಗಳ ಟಿರಿಟ್ಟಿರಿರಿ ಶಂಖಂಗಳ ಭೋಂಭೋಂ
ಮದ್ದಳೆಗಳ ಧೋಂಧೋಂ ಜಾಗಟೆಗಳ ಢಣಢೋಂ
ತಕೃತ್ತಕೃತ್ತಕಿಟತಕೃದ್ಧಿಗಿಟತಕೃದ್ಧಿಗಿತೋಂ
ತಳಾಂಗು ತಳಾಂಗು ತಕಿಟತ್ತಳಾಂಗುತದ್ಧಳಿರೋಂ

ಗೆಜ್ಜೆಯು ಝಲಿ ಝಲಿ ಝಲ್
ತಾಳದ ಝಲ್ಲರಿ ಝಲ್
ಚವರಿಯ ಕೈಬಳೆ ಚಿಲಿಚಿಲಿ
ಉಲಿದಾಡಲು ಪರಿಪರಿಯಲಿ

ಭವವನುಳಿದು ನಿನ್ನ ಭಾವಕೇರಿ ಹಾರ್ವ ಹಕ್ಕಿಯಂತೆ
ಹೃದಯ ಮನದ ರೆಕ್ಕೆಯಿಂತು ಒಡಿವ ದನಿಗೆ ಮುದಂಗೊಂಡು—
ನಂದನಂದನಾ

ಎಲ್ಲರೂ

ರಾಗ—ಆನಂದಭೈರವಿ

ಆಸೆವೇಗದಿಂದ ಹೊನಲು
ಕಡಲ ಸೇರಿ ವೇಗವಳಿದು
ಆ ಕಡಲಿನ ವೇಗದೊಳೇ ತೆರೆತೆರೆಯಾಗಲೆಯುವ ತೆರ—
ನಂದನಂದನಾ
ನಿನ್ನಾನಂದದಿ ನಮ್ಮನು ಈ ತೆರವಲೆಸಲು ಬೇಳ್ಪೆವು
ಗೋಕುಲಾನಂದನಾ

ರಾಗ—ತೋಡಿ

ನಿದ್ದೆ ಬರದೆ ಉದ್ದವಾದ
ಇರುಳಿನಂತೆ ಹಗಲ ಕಳೆದು
ನೀನೆದ್ದಿಹ ಇರುಳಿನೊಳೇ ನಾವೆಂದಿಗು ಎಚ್ಚರುವೊಲು—
ನಂದನಂದನಾ
ವರವನಿತ್ತು ಸಲವುಮತ್ತು ನಮಗೆಂದಿಗು ಇರೆ ಹರಸೈ
ಗೋಕುಲಾನಂದನಾ

ರಾಗ—ನೀಲಾಂಬರಿ

ಕಂಪನಿಡುವ ಕಲ್ಪತರುವೋ
ಎನಲು ನೀನು ಕೊಳಲನೂದಿ
ಬೇಡಿಕೆಯೇ ಬೇಡೆನಿಸುವ ತೇಜದಿಂದ ನಾವೆಸೆವೊಲು—
ನಂದನಂದನಾ

ಹೊಗೆಯುನೇರುವಗ್ನಿಯಂತೆ ನಮ್ಮಾಸೆಯನೇರು ನೀನು
ಗೋಕುಲಾನಂದನಾ

ರಾಗ—ಸಾವೇರಿ

ನಿನ್ನ ಪ್ರೇಮದುದಯವನ್ನು
ತೋರುವ ಮುಂಬೆಳಗಿಸಂತೆ
ಮಂಗಳದರ್ಶನೆ ರಾಧೆಯ ಸಂಗಡ ನೀ ಕಳೆಯು ತೀವಿ—
ನಂದನಂದನಾ
ಬೃಂದಾವನದೊಳು ನಮ್ಮನು ನಲವಿನಿಂದ ಬೆಳಬೆಳಗಿಸು
ಗೋಕುಲಾನಂದನಾ

(ಮತ್ತೆ ಭೈರವಿಯಲ್ಲಿ ಪಲ್ಲವಿ ಅನುಪಲ್ಲವಿ ಹೇಳಿ ನೃತ್ಯ ನಿಲ್ಲುತ್ತದೆ.)

ಕೃಷ್ಣ

ರಾಗ—ಆಭೋಗಿ

ನಾನೆ ನಲ್ಲ ನಾನೆ ಎಲ್ಲ ನಾನು ನಾನಲ್ಲ
ಇಂತೆನುವಿರೆಲ್ಲ
ಅರರೆ ನಿಮ್ಮಕ್ಕರೆಯ ಹಾಲೊಳು ಕರಗಿರುವೆನಲ್ಲ
ನನಗು ನಾನಿಲ್ಲ

ಸಕಲಸೌಭಾಗ್ಯಗಳು ಬಾಳೊಳು ಸೆರೆಯುತಿರಲಿಂತು
ಪೂರ್ಣನೆನಿಪಂತು
ಏನನೆಂದರು ನೀವು ನಾನದನೊಪ್ಪಿಕೊಳುವಂದ
ತಿಳಿವಾಯ್ತು ಮುಂದ

(ಕೃಷ್ಣ ನೃತ್ಯವನ್ನು ಪ್ರಾರಂಭಿಸುತ್ತಾನೆ—ಎಲ್ಲರೂ ಕುಣಿಯುತ್ತಾರೆ.)

ಎಲ್ಲರೂ

ಹಾಡು : ರಾಗ—ಬೇಹಾಗ್

ನಲವು ನಲವು ನಲವು—ಹರಿಹರಿ || ಪ ||
ಪ್ರೇಮಪೂರವೆಮ್ಮೆದೆಯೊಳಗೀ ಪರಿ
ಹರಿವುಗೊಂಡು ಸೆರೆಯೇರುವ ತೆರವು || ಅ. ಪ ||

ಫಣಿಯೊಲು ಜಡೆಹೆಡೆಯೊಲೆದಾಡೆ
ಕುಣಿತದ ಗಣಿತಕೆ ವೈ ಕೂಡೆ
ಸರಸವಿರಸದೊಳು ಹಿಂದೆನೆ ಮುಂದೆನೆ
ಹೆಜ್ಜೆ ನಡೆಯೆ ಕಿರುಗೆಜ್ಜೆಯು ನುಡಿತಕೆ—ನಲವು

ಹಿಗ್ಗಿನ ಹೊಳಹನು ಕಣ್‌ಕದಿರು
ಬಗ್ಗಿಸುತಿರೆಯಿರೆ ಇದಿರಿದಿರು
ತುಟಿದಳ ತೆರೆಯುತ ಹಾಡಿನ ಕಂಪನು
ಬಗೆಯೊಳಲೆವ ಒಲವೆಲರಿಗೆ ತೆರುತಿರೆ—ನಲವು

ಇರುಳಿನ ಬಗೆಬಗೆ ದನಿಯೊಳಗೆ
ರತುನದಂತೆ ಬಳೆದನಿ ಮಿನುಗೆ
ಬೆಳುದಿಂಗಳಿನೊಳು ತಾರೆಗಳಂದದಿ
ಕೊಳಲುಲಿವೊಳು ತೇಂಕಾಡುತ ನಾವಿರೆ—
ನಲವು ನಲವು ನಲವು

(ಇವರೆಲ್ಲ ಈ ತೆರ ನರ್ತಿಸುತ್ತಿರುವಾಗ ತಪಸ್ಸಿನಿಂದ ಸಿದ್ಧರಾದಂತೆ ಎದ್ದ ಋಷಿಗಳು ಬೆರಗಿನ ಭಾವದಲ್ಲಿ ಬರುತ್ತಾರೆ.)

ಒಬ್ಬ ಋಷಿ

ರಾಗ—ನಾಟಿ

ಏನಾತ್ಮಕಂಪಮಿದು ತಪದ ಬಿಗಿ ಬಿರಿಯೆ
ಪ್ರಾಣಸಾರವೆ ಮೇಲಕುಕ್ಕುಕ್ಕಿ ಹರಿಯೆ
ಇಂದ್ರಿಯಗ್ರಾಮಗಳ ಮೇಲುರುಳುತಿಂತು
ಬಹುದು ಮಹದಾನಂದ ಪ್ರಳಯಮೆನಿಪಂತು

ಇನ್ನೊಬ್ಬ ಋಷಿ

ರಾಗ—ಆರಭಿ

ಮರಂಗಳೋ ಸಿದ್ಧರು ಪೊರೆಯೇರಿದ ತೆರಂಗಳೋ
ಜನಂಗಳೋ ಕೊಳಲಿಂ ಧುಮ್ಮಿಕ್ಕಿದ ಸರಂಗಳೋ
ಬೃಂದಾವನವೋ ಬಾಸವರಾಡುವ ನಂದನವೋ
ನಂದನ ಮಗನೋ ಇಂದ್ರನೊ ಪರಶಿವನೊ ಹರಿಯೋ

## ಮತ್ತೊಬ್ಬ ಋಷಿ

ರಾಗ—ವರಾಳಿ

ಸಾಸಿರಕಣ್ ಸಾಸಿರತಲೆ ಸಾಸಿರಪಾದ
ಬಾಳ್‌ಬಾಳಿಗು ಹಬ್ಬುತ್ತಿಹುದಿವನ ಹಸಾದ
ಇವನಿಚ್ಚೆಯೆ ಹೃದಯವ ಹೊಕ್ಕಿವನವನೆನದೆ
ಇವನಂಗವೆ ನಾವೆನೆ ರಾಸಕೆ ಸೆಳೆಯುತಿದೆ

(ಕೃಷ್ಣ ಹೊರತು ಎಲ್ಲರೂ ಬೆಕ್ಕಸಬೆರಗಾಗುವಂತೆ ಋಷಿಗಳು ಈ ಮುಂದಿನ ಹಾಡನ್ನು ಹಾಡಿಕೊಂಡು ಕುಣಿಯುತ್ತಾ ರಾಸವೃಂದವನ್ನು ಬಳಸಿ ಆ ಮೇಲೆ ಮಧ್ಯೆ ನುಗ್ಗಿ ಕೃಷ್ಣನನ್ನು ಎಲಗೊಂಡು ಹೊರಟು ಹೋಗುತ್ತಾರೆ.)

### ಋಷಿಗಳು

ಹಾಡು : ರಾಗ—ಪುನ್ನಾಗವರಾಳಿ

ಬಿಡುಗಡೆಯೋಹೋ ಬಿಡುಗಡೆ
ಎಲ್ಲ ತಪಕೂ ನಿಲುಗಡೆ

ತಪದಿ ಸೆಟೆದಿರುವ ಮೈಯ ಬಿರುವೆಲರು
ಮರವ ಕುಲುಕುವಂತು
ನಲವು ಬಂದು ಮರುಳೊಂದ ತಂದು ಕುಣಿ-
ತಕ್ಕೆ ಸೆಳೆವುದಿಂತು—
ಬಿಡುಗಡೆಯೋಹೋ ಬಿಡುಗಡೆ

ಹೊಟ್ಟ ಕಳೆದು ಸಸಿ ಬಿಟ್ಟಿತೋ
ಮೊಟ್ಟೆಯೊಡೆದು ಬಾಳ್ ಹುಟ್ಟಿತೋ
ಧ್ಯಾನಸುಪ್ತಿಯಿಂ ಜ್ಞಾನವೆದ್ದಿತೋ
ಬಾಳಿಗಾನಂದ ಹೊತ್ತಿತೋ
ತನ್ನತನವುರಿದು ಎಲ್ಲ ನಲವಾಗೆ
ನಮ್ಮದೆಲ್ಲವನು ಮುತ್ತಿತೋ—
ಬಿಡುಗಡೆಯೋಹೋ ಬಿಡುಗಡೆ

ಸಿಪ್ಪೆಯೊಗೆವುದಿಂತೋ
ಚಿಪ್ಪ ತೆಗೆವುದಿಂತೋ

ಆಸೆ ರಸವಾರಿ ಬಾಳ ಸಿಹಿಯೂರಿ
ಪ್ರಕೃತಿಯುಪ್ಪು ತಪ್ಪಿ
ಬ್ರಹ್ಮಸವಿಸವಿದು ರುಚಿಗೆ ಆ ಎಂಬ
ಸಲ್ಮೆ ಗಾತ್ಮವೊಪ್ಪಿ—
ಸಿಪ್ಪೆ ತೆಗೆವುದಿಂತೋ
ಚಿಪ್ಪ ಕಳೆವುದಿಂತೋ—
ಬಿಡುಗಡೆಯೋಹೋ ಬಿಡುಗಡೆ

ನಲವೊಳಿರುವೆವಾಹಾ
ತಿರುಗಿ ಮರಳೆವಾಹಾ
ಕುಶಲಿ ಬಿಲ್ಗಾಳು ಬಿಡುವ ಸರಳಂತೆ
ವೇಗವಾಂತೆವಾಹಾ
ಸಚ್ಚಿದಾನಂದದೆದೆಗೆ ಸೇರಾಗಿ
ಸಟ್ಟು ನಿಲುವೆವಾಹಾ
ತಿರುಗಿ ಮರಳೆವಾಹಾ
ನಲವೇ ಕೊನೆ ಆಹಾ—
ಬಿಡುಗಡೆಯೋಹೋ ಬಿಡುಗಡೆ
ಎಲ್ಲ ತಪಕೂ ನಿಲುಗಡೆ

(ಋಷಿಗಳು ಹೋಗುತ್ತಾರೆ; ರಾಸವೃಂದ ಕಲಕಿಹೋಗಿದೆ.)
(ತೆರೆ ಬಿದ್ದು ಮತ್ತೆ ಏಳುತ್ತದೆ.)

ಗೋಪಿಯರು

ಅಬ್ಬ ಅಬ್ಬ ಅಬ್ಬಬ್ಬ—
ಸುಂಟರಗಾಳಿಯ ತೆರದೊಳು ಬಂದರು
ಬೆಳೆದ ಹೊಲದೊಳಗೆ ತುರುಹಿಂಡಂತೆ
ನುಗ್ಗಿದರವ್ವಾ ಜೋಗಿಗಳು
ಬೆಟ್ಟದ ಕಿಬ್ಬಿಯು ಜೋಗಿಗಳು
ಎಲ್ಲೋಡಿದರೀ ಅಯ್ಯಗಳು
ಯಮುನೆಯ ಮೇಲೆಯೆ ನಡೆದುಹೋದರೋ
ಹೋಹೋ ಎಲರೊಳೆ ತೇಲಿದರೋ—
ಅಬ್ಬ ಅಬ್ಬ ಅಬ್ಬಬ್ಬ

(ಇಷ್ಟರಲ್ಲಿ ಊರಿನ ಹಿರಿಯರು ಬರುತ್ತಾರೆ; ಅವರನ್ನು ನೋಡಿ)

ಅಕ್ಕೊ ಅಕ್ಕೊ ನನ್ನಪ್ಪ
ಮಾವ ತಾತ ಚಿಕ್ಕಪ್ಪ
ರಾಧೇ ರಾಧೇ ಮರೆಯಾಗು
ನಾಗವೇಣಿ ನೀ ಜೊತೆಗಾಗು
ಏಗತಿ ಏಗತಿ ಏಗೆಯ್ವೊಂ

(ಗೋಪಿಯರೂ ಗೋಪಾಲಕರೂ ದಿಗಿಲಿನಿಂದ ಮರೆಯಾಗುತ್ತಾರೆ. ರಾಧೆ ಕೃಷ್ಣನ ಕೈ ಕೊಸರಿಕೊಂಡು ಓಡುವಳು. ನಾಗವೇಣಿ ಹಿಂಬಾಲಿಸುವಳು. ಕೃಷ್ಣ ಮಾತ್ರ ನಗುತ್ತ ನಿಂತಿರುತ್ತಾನೆ. ಹಿರಿಯರು ಹಾಡುತ್ತಾ ಬರುತ್ತಾರೆ.)

ಹಿರಿಯರು

ಹಾಡು : ರಾಗ—ರಂಜಿನಿ

ಕೊಳಲನೂದು ಗೋವಿಂದ
ಮುಪ್ಪಿಗಾಗಲಾನಂದ

(ಈ ಗಾನದ ನಡುವೆ ಎಲ್ಲರ ಕೊನೆಗೆ ಬಂದ ಸುದಾಸ ಸುಬಲರು ಈತೆರ ನುಡಿಯುತ್ತಾರೆ.)

ಸುಬಲ

ರಾಧೆಯಂತಿತ್ತು ಸುದಾಸ

ಸುದಾಸ

ನಿನ್ನ ಕಣ್ಣು ಮಂಜಾಗಿದೆ ಸುಬಲ
ಅಕೊ ನಾಗವೇಣಿಯೋಡುತಲಿಹಳು

ಸುಬಲ

ಜತೆಗೆ ರಾಧೆ ಇದ್ದೀ ಇಹಳು

ಸುದಾಸ

ಪರಿಕಿಪ ಬಾ—ಹೋಯಿತು ಮಾನ
ಹಾಳಾಗಲಿ ಇವರೀ ಸುಮ್ಮಾನ

(ಇಬ್ಬರೂ ಓಡುವರು. ಹಿರಿಯರು ಮಾತ್ರ ಹಾಡುತ್ತಿರುತ್ತಾರೆ.)

ಹಿರಿಯರು

ರಾಗ—ಹಿಂದಿನದೇ

ಕೊಳಲನೂದು ಗೋವಿಂದ
ಮುಪ್ಪಿಗಾಗಲಾನಂದ || ಪ ||

ಮೈ ಮುಪ್ಪ ಕಾರುವಂತೆ
ಮನಕೆ ಚಿಂತೆ ಸೇರದಂತೆ
ಹರೆಯದ ಹುರುಪಿಂದ ನಾವು
ಹಗುರು ಹೆಜ್ಜೆಯಿಡುವ ತೆರದಿ—ಕೊಳಲನೂದು

ಕಣ್ಣ ಮಂಜು ಹರಿಯುವಂತೆ
ಕಿವಿಯು ಹರಿತವಾಗುವಂತೆ
ಬಾಳೇ ಸನಿಯ ಸಾವು ದೂರ
ಎಂಬ ತೆರದ ನಂಬಿಕೆ ಬರೆ—ಕೊಳಲನೂದು

ದಿನದಿನಕೂ ಬೆಳೆವ ಘೋರ
ಕಾಲ ಬೆನ್ನಬಾಗೆ ಭಾರ
ನಿನ್ನ ಕೊಳಲ ಮಂತ್ರಕವನು
ಹೆದರಿ ಹೆಗಲನಿಳಿವ ತೆರದಿ—ಕೊಳಲನೂದು

ಕೃಷ್ಣ

(ನಗೆಮೊಗದಿಂದ)

ಓಹೋ ತಾತ ಓಹೋ ತಾತ
ಇಲ್ಲೇತಕೆ ಬಂದಿರಿ ತಾತ
ಹುಡುಗರನೆಲ್ಲ ಹೆದರಿಸುತ
ಹುಡುಗರ ಹುಡುಗಾಟಕೆ ಬಿಟ್ಟು
ಹಿರಿಯರು ಹೊರಡುವುದೇ ಚೆಂದ

ಹಿರಿಯರು

ಪೋಪೆವು ಪೋಪೆವು
ಒಂದು ನುಡಿತವನು ನುಡಿಸೈ—ಪೋಪೆವು

ಕೃಷ್ಣ

ಸೈ ಇದೆ ಒಪ್ಪಂದ

ಹಿರಿಯರು

ಹ್ಞೂ ಸೈ ಇದೆ ಇದೆ ಒಪ್ಪಂದ

(ಕೃಷ್ಣ ಭಾವದಿಂದ ಕೊಳಲೂದುತ್ತಾನೆ, ಈ ಅರ್ಥ ಬರುವಂತೆ.)

ರಾಗ—ಪೀಲು

ನಿಲ್ಲು ನಿಲ್ಲು ತುಸ ತಳುಗು
ನಮ್ಮ ಬಾಳಿನ ಕರೆಗೆ ಬಂದು ತಗುಲುತಲಿರುವ
ನಲ್ಮೆಸಿರಿಕಡಲ ತೆರೆಯೇ—
ಒಯ್ಯಿ ಒಯ್ಯಿ ಸೆಳೆದೊಯ್ಯಿ
ಮರಳಲೇಬೇಕಾದೊಡೆಮ್ಮ ನೀ ತುಸ ಬಿಡದೆ
ನಡುವಿನಾಳಕ್ಕೆ ತೆರೆಯೇ

(ಹಿರಿಯರು ಲಾಲಿಸಿ ಸ್ತಂಭೀಭೂತರಾಗಿ ಆಮೇಲೆ ಥಟ್ಟನೆ ಕುಣಿಯುತ್ತಾರೆ.)

ಹಿರಿಯರು

ಹಾಡು : ರಾಗ—ಮಾಂಡ್

ಭಾಪುರೇ ಮಝು ಭಾಪುರೇ—ಭಲೆ
ಲೇಸು ಲೇಸು ಲೇಸೈ ಹರೇ—

ಸುಕ್ಕುಮೈಯ ಕೆಳಗಿಕ್ಕೆವು—ಭಲೆ
ಸುಕ್ಕುಮೈಯ ಕೆಳಗಿಕ್ಕದಲೆ ನಾ-
ವುಕ್ಕುವ ಮೋದಕೆ ಅಪ್ಪೆವು—ಅಹ ಭಾಪುರೇ

ಮುಪ್ಪೆ ನಮಗೊಪ್ಪೆಂಬೆವು—ಭಲೆ
ಮುಪ್ಪೆ ನಮಗೊಪ್ಪೆಂದು ನಾ-
ವಿಪ್ಪತ್ತು ಹರೆಯುವ ದೂರೆವು—ಅಹ

ಲೋಕದ ಕೊಂಕನು ಬೊಂಕೆವು—ಭಲೆ
ಲೋಕದ ಕೊಂಕನು ಬೊಂಕದಲೆ ನಾ-
ವೇಕಾಂತದೊಳದ ನಗುವೆವು—ಅಹ

ಹಿಂದೆ ಬಹರಿಗೆ ಅಂದವು—ಭಲೆ
ಹಿಂದೆ ಬಹರಿಗೆ ಅಂದವೆನೆ ನಾವ್
ತಂದ ಬಾಳನು ಬಿಡುವೆವು—ಅಹ

ಬೀಳುವ ಕಾಲಕೆ ಬೆದರೆವು—ಭಲೆ
ಬೀಳುವ ಕಾಲಕೆ ಬೆದರದೆ ನಾವದ-
ನೇಳಿಗೆ ಎಂದೇ ಬಗೆವೆವು—ಅಹ

ಕೃಷ್ಣ

ಭಾಪುರೇ ಮಝು ಭಾಪುರೇ—ಭಲೆ
ಲೇಸು ಲೇಸು ತಾತಂದಿರೇ—

ಹುಡುಗರಂತೆಯೇ ಕುಣಿದಿರಿ—ಭಲೆ
ಹುಡುಗರಂತೆಯೇ ಕುಣಿದರು ನೀವು
ಹಿರಿಯರಂತೆಯೇ ನುಡಿದಿರಿ—ಅಹ ಭಾಪುರೇ

ಇನ್ನು ಊರಿಗೆ ಮರಳಿರಿ—ಭಲೆ
ಇನ್ನು ಊರಿಗೆ ಮರಳುತ ನೀವು
ಚೆನ್ನ ನಿದ್ದೆಗೆ ಸಲ್ಲಿರಿ
ಬರುವೊಡೆ ನಾಳೆಗು ಬನ್ನಿರಿ—ಅಹ ಭಾಪುರೇ

ಹಿರಿಯರು

ಆಗಲಿ ಕೃಷ್ಣ ಆಗಲಿ ಕೃಷ್ಣ
ಇನ್ನೊ ತುಸು ನುಡಿಸೊ ಕೃಷ್ಣ—
ನಾಳೆ ಎಲ್ಲೊ ನಾವೆಲ್ಲೋ—

ಕೃಷ್ಣ

ಮರೆತಿರ ತಾತಾ ಒಪ್ಪಂದ

ಹಿರಿಯರು

ಹೂ ಇಹುದಪ್ಪಾ ಆ ನಿರ್ಬಂಧ

ಒಬ್ಬ ಹಿರಿಯ

ಬನ್ನಿರಿ ಬನ್ನಿರಿ ರಾಮನೆಡೆ
ಅವರಾಟವನೂ ನೋಡುವೊಡೆ

(ಅವರು ಹೋದಮೇಲೆ ಕೃಷ್ಣ ಕೊಳಲನೂದುತ್ತಾ ನಿಂತಿರುವಾಗ ಕಲಕಿದ ನೀರಿಗೆ ಮರಳಿ ಮೀನು ನೆರೆವಂತೆ, ಚೆದರಿದ ಪಾರಿವಾಳಗಳು ತಿರುಗಿ ಕೂಡುವಂತೆ ಗೋಪಗೋಪಿಯರು ಬಂದು ನೆರೆದುಕೊಳ್ಳುತ್ತಾರೆ. ರಾಧೆ ಮತ್ತು ಅವಳ ಸಖಿ ಮಾತ್ರ ಕಾಣುವುದಿಲ್ಲ. ಮನೆಗೆ ಓಡಿ ಹೋದರೋ ಅಥವಾ ತಮ್ಮನ್ನು ಅರಸುತ್ತಿರುವ ತಂದೆಗಳ ಕಣ್ಣಿಗೆ ಸಿಕ್ಕದಂತೆ ಯಾವ ತರು ಕುಂಜದಲ್ಲಿ ಅಡಗಿದ್ದಾರೋ.)

ಕೃಷ್ಣ

ಏನಿತಿನಿದು ಏನಿತಿನಿದು ನಿಮ್ಮ ಕೂಡಿರಲು
ಕಾಡ ಜನ ಊರ ಜನರೆಲ್ಲ ಹರಸಿರಲು
ಸೊಗದ ಕೋಡೊಳೆ ನಿಂತೆ ಇದಕಿಲ್ಲ ಮಿಗಿಲು
ಮುನಿಯದೇ ನಾಚದೇ ರಾಧೆ ಬಳಿಗಿರಲು—
ಒಲುಮೆಹೂರಣದಂತಿರುವ ರಾಧೆ—
ಓ ರಾಧೇ ರಾಧೇ ಎಲ್ಲಿ ರಾಧೆ—

ಎಲ್ಲರೂ

ಓ ರಾಧೇ ರಾಧೇ ಎತ್ತ ರಾಧೆ
ತಂದೆಯು ಕಂಡಂಜಿ ಹೋದಳೋ—
ತಿರುಗಿ ಬಾರಳೋ—ಓ ರಾಧೇ—

ಕೃಷ್ಣ

(ಕಳವಳದಿಂದ)

ಹಾಡು : ರಾಗ—ಕಾಪಿ

ಎಲ್ಲವಳೆಲ್ಲವಳೆಲ್ಲವಳು—ನಿಲ-
ದಾಡುವ ಕಂಗಳ ಸೊಲ್ಲವಳು || ಪ ||

ಗಿಡಗಳ ಮರೆಯಿಂದಾರಿಗು ತೋರದೆ
ನನ್ನನೆ ನೋಡುವ ಮರುಳವಳು—ಕೆಂ-
ದಾವರೆ ಕೆನ್ನೆಯ ಕುರುಳವಳು

ಕಂಗಳು ಬಿರಿಯಲು ಎದೆ ಮೊಗಕೇರಿತೊ
ಎನೆ ಚೆಸ್ನೊಲುಮೆಯ ಹೊಗರವಳು—ಹಿಂ-
ದಿರಿಸುವ ನಾಚಿಕೆಯೊಗರವಳು

ನನ್ನನೆ ನೆನೆವ ನಿದ್ದೆಗೆ ಸುಳಿವ
ಕನಸಂತೆಲ್ಲವ ಕಾಂಬವಳು—ನಾ-
ನೊಬ್ಬನೆ ದಿಟವೆಂದೆಂಬವಳು

ಈ ಕಣ್ಣಾ ತುಟಿ ಈ ನಗೆ ಆ ನಡೆ
ಈ ಕೊಂಕೆಲ್ಲವ ಪಡೆದವಳು—ಅಹ
ಎಂತೋ ಎನ್ನದೆ ತಡೆದವಳು

ಎಲ್ಲವಳೆಲ್ಲವಳೆಲ್ಲವಳು—ನಾ
ನುಡಿಸುವ ಕೊಳಲಿನ ಸೊಲ್ಲವಳು

ಎಲ್ಲರೂ

ಎಲ್ಲವಳೆಲ್ಲವಳೆಲ್ಲವಳು—ನಮ
ಕೃಷ್ಣನ ಹಂಬಲ ಸೊಲ್ಲವಳು—

ಗಿಡದೆಡೆಯೇ
ದಡದೆಡೆಯೇ
ಹೊನ್ನೆಯ ಬಂಡೆಯ ಬುಡದೆಡೆಯೇ
ಕೊಳದೆಡೆಯೇ
ಮಳಲೆಡೆಯೇ
ನೈದಿಲೆಯರಳಿಹ ಕೆರೆಯೆಡೆಯೇ

ಎಲ್ಲವಳೆಲ್ಲವಳೆಲ್ಲವಳು—ನಮ
ಕೃಷ್ಣನ ಹೃದಯವ ಬಲ್ಲವಳು—

ರಾಸೆಯನರ್ಥಕೆ ತಡೆದವಳು
ಹಾಡನು ಪಾಡಂ ಗೈದವಳು
ಸುಪ್ಪಿಗೆ ಸುಯ್ಯಲ ತಂದವಳು—ನಮ
ಕೃಷ್ಣನ ಹೃದಯದಿ ನಿಂದವಳು—

ಎಲ್ಲವಳೆಲ್ಲವಳೆಲ್ಲವಳು—ನಮ
ಕೃಷ್ಣನ ಹಂಬಲ ಸೊಲ್ಲವಳು

ರಾಗ—ಉದಯರವಿಚಂದ್ರಿಕಾ

ಎಲೌ ರಾಧೇ ರಾಧೇ ಗಿರಧರಹೃದುನ್ಮಾದನಕರೀ
ಸಖೀ, ಎಲ್ಲೌ ಎಲ್ಲೌ ಮುರಲಿಯುಲುಹೂ ನಿಂತಿತಮಮಾ
'ಪ್ರಿಯೇ, ತೋರೌ ತೋರೌ' ಎನುತ ಕೊಳಲಂ ಮೋನಗೊಳಿಸು-
ತ್ತಿಗೋ ಓಪಂ ಪೋಪಂ ಬನವನಲೆಯಲ್ ತೊರೆಯುತೆಮ್ಮಂ

(ರಾಧೆಯನ್ನು ಹುಡುಕಲು ಹೋಗಿದ್ದ ಕೆಲವರು ಗೋಪಿಯರು ಈ ವೇಳೆಗೆ ಹಿಂದಕ್ಕೆ ಬರುತ್ತಾರೆ.)

ಹೊಸದಾಗಿ ಬಂದವರು

ಬನವೆಲ್ಲಾ ಹುಡುಕಿದೆವೆಲ್ಲಾ
ರಾಧೆಯು ಕಾಣಲೆ ಇಲ್ಲಾ

(ಕೃಷ್ಣ ಕೊಳಲನ್ನು ಸೊಂಟಕ್ಕಿರಿಸಿ ಖಿನ್ನನಾಗಿ ಬಂಡೆಯ ಮೇಲೆ ಕುಳಿತುಕೊಳ್ಳುತ್ತಾನೆ.)

ಹಾ ಕೊಳಲನಿಳಿಸಿ ಖಿನ್ನನಾದನಲ್ಲಾ
ನಮ್ಮೆಲ್ಲರ ನಲ್ಲ

ಎಲ್ಲರೂ

ಹಾಡು : ರಾಗ—ಶ್ರೀರಾಗ

ನಿಲ್ಲಿಸದಿರು ವನಮಾಲೀ
ಕೊಳಲ ಗಾನವ || ಪ ||
ನಿಲ್ಲಿಸೆ ನೀ ಕಳೆವುದೆಂತೊ
ಭವಭೀತಿಯ ಕೇಶವ || ಅ. ಪ ||

ಕ್ರೂರದೈವ ಬಲಿಗೆ ಎಂತು
ಕಾಯುತಿಹುದೊ ದೂರ ನಿಂತು
ಅಂತೆ ನಮ್ಮ ತುತ್ತುಗೊಳ್ಳೆ
ಹೊಂಚುತಿಹುದು ಭೀತಿಯಿಂತು—ನಿಲ್ಲಿಸದಿರು

ಊರಿದಲ್ಲ ಹಳುವು ಎಂಬ
ಹಗಲಿದಲ್ಲ ಇರುಳು ಎಂಬ

ಇಂತುಗೈದುದೊಳಿತೇ ಎಂಬ
ಭಯವಪ್ಪುದೊ ಬಗೆಯ ತುಂಬ—ನಿಲ್ಲಿಸದಿರು

ನಾನು ಸತಿ ಆತ ಪತಿ
ಅಣ್ಣ ಅಕ್ಕ ಏಸು ಗತಿ
ಇಂತು ಸಂಟತನವಿವೆಲ್ಲ
ಮುರುಕೊಳಿಪುವೊ ಮನದಿ ನಲ್ಲ—ನಿಲ್ಲಿಸದಿರು

ಹಿರಿಯರಿಟ್ಟ ನಯದ ನಡೆಯ
ಮೀರಿಹೆವೆಂದಹುದುರುಭಯ
ನಿನ್ನ ಕೊಳಲು ನೀಡಲಭಯ
ನಟ್ಟಿರುಳೊಳೆ ಬಂದೆವಯ್ಯ—ನಿಲ್ಲಿಸದಿರು

ನಮ್ಮ ಬಾಳಿನಾಳದಿಂದ
ಮತ್ಸ್ಯನಂತೆ ಮೇಲೆ ತಂದ
ಕೃಷ್ಣ ಈ ಚಿದಾನಂದ
ಮರಳಿ ಮುಳುಗಿ ಹೋಹುದಯ್ಯ—ನಿಲ್ಲಿಸದಿರು

ನೀರು ನಿಂತು ಕೊಳೆಯುವಂತೆ
ನಮಗಹುದೋ ನೂರು ಚಿಂತೆ
ಕೊಳಲುಲುಹಿನ ನೆರೆಯು ನುಗ್ಗಿ
ಜೀವ ಹರಿಯಲೆಂಥ ಸುಗ್ಗಿ—ನಿಲ್ಲಿಸದಿರು

ಭವದ ಮಾಯೆ ಅಡಗುವಂತೆ
ಅಹಂಕಾರ ಕರಗುವಂತೆ
ನಿನ್ನ ಗಾನಸದನುರಾಗವು
ಬದುಕ ತುಂಬಲನುಗಾಲವು—
ನಿಲ್ಲಿಸದಿರು ವನಮಾಲೀ
ಕೊಳಲ ಗಾನವ

ಕೃಷ್ಣ

ರಾಗ—ಗೌರೀಮನೋಹರಿ

ಮುದವು ಮನದಿ ತೀರಿತ್ತೆಂತು ನಾನಾವ ರಾಗ-
ಕ್ಕುಸಿರ ಕೊಡಲಿ ರಾಧಾನೇತ್ರಸುಸ್ನೇಹದೂರಂ
ಎಲರು ತಿರೆಯ ಬಿಟ್ಟಂತಿಂದು ನಕ್ಷತ್ರಗೂಡು-
ತ್ತಿರುಳ ತೊರೆದವೋಲೆನ್ನಾತ್ಮವುಂ ಭಾವಶೂನ್ಯಂ

ಎಲ್ಲರೂ

ಹಾಡು : ರಾಗ—ಖರಹರಪ್ರಿಯ

ಸಖ ಹರೀ ವಿಷಾದವ ನೀಗೆಲೈ || ಪ ||
ಭವಮೋಚನಾ ಗೆಲವಾಗೆಲೈ || ಅ. ಪ ||

ಅರಳಿಹ ಬಕುಲಗಳೆಲರಿಗೆ ಕಂಪ
ತೆರುತಿವೆ ಇರುಳಿದು ಜೊನ್ನಕೆ ಪೆಂಪ
ನಿನಗಿನಿಯಾ ಸಮ್ಮಿರವ
ಇಕೊ ತೆರುವೆವಯ್ಯ ಲೇಸಾಗೆಲೈ—ಸಖ ಹರೀ

ಎಲ್ಲ ಬಣ್ಣಕೂ ಬೆಳಕಪ್ಪಂತೆ
ಎಲ್ಲ ರಾಗಕೂ ಕೊಳಲಪ್ಪಂತೆ
ನಮಗಿನಿಯಾ ನಿನ್ನೊಲವ
ತುಸವೀಯುತ ನೀನೆಮಗಾಗೆಲೈ—ಸಖ ಹರೀ

ಮೋಹನ ರಾಧಾಮೋಹದ ನೆಳಲು
ನಿನ್ನಾವರಿಸದ ತೆರ ತಡೆಗೊಳಲು
ಇಕೊ ಇನಿಯಾ ನಮ್ಮೆದೆಯ
ಕಡುನೇಹದಿ ತಂದಿಹೆವೀಗಳೈ—ಸಖ ಹರೀ

ಕೃಷ್ಣ

ರಾಗ—ಷಣ್ಮುಖಪ್ರಿಯ

ಕಾಣೆಂ ನಾಂ ಸಖರೇ ಮನಂ ಕಳವಳಂಗೊಂಡಿರ್ಪುದೇತರ್ಕೆಯೋ
ರಾಧಾರಾಸದ ಯೋಗಕಿಂದು ಕೊನೆಯೆಂದಾಶಂಕೆಯಾಂತಿರ್ದಪೆಂ
ಬ್ರಹ್ಮಂ ಸಕ್ಕನೊ ಬೆನ್ನಹಿಂದೆ ಎನುವಂತಾಯಿತ್ತು ಮಾಮಾಮುದಂ
ಆ ಮೋದಕ್ಕಿದೆ ಸಾಜಮೆನ್ನೆ ಬಗೆಯೊಳ್ ಖೇದಂ ಪದಂಗೊಂಡುದೋ

(ಕೆಲವರು ರಾಧೆಯನ್ನರಸುವ ತೆರ ತೋರುತ್ತಲೂ, ಕೆಲವರು ಸುಮ್ಮನೆ ನಿಂತೂ, ಅಂತು ಎಲ್ಲರೂ ಖಿನ್ನರಾಗಿರುವಾಗ ದೂರದಲ್ಲಿ ಹಾಡು ಕೇಳಿಬರುತ್ತದೆ. ಬಲರಾಮಾದಿಗಳು ಗೆಲವಿನಿಂದ ಅಕ್ರೂರನೊಡಗೂಡಿ ಬರುತ್ತಾರೆ.)

ಬಲರಾಮಾದಿ ಗೋಪರು

ಹಾಡು : ರಾಗ—ಜುಂಜೋಟಿ

ಬನ್ನಿರೋ ನಾವೆಲ್ಲ ಮಧುರೆಗೆ ಬಿಲ್ಲಹಬ್ಬಕೆ ಹೋಗುವ
ಹಳುವ ಹಳ್ಳಿಯು ಬಿಡುತ ಸೊಗಸಿನ ಹೊಳಲ ಜಾತ್ರೆಗೆ ಹೋಗುವ

ಬಲರಾಮ

ಹೈ ಹಚಚ್ಚಾ ಎಂದು ತುರುಗಳ ಹಣ್ಣುಮುದುಕರೆ ಕಾಯಲಿ
ಹಟ್ಟಿಯೊಳೆ ನಿಟ್ಟುಸಿರನಿಡುತ ಹೆಂಗಳುಳಿಯಲಿ ಊರಲಿ—ಬನ್ನಿರೋ

ಮಿಕ್ಕವರೊಬ್ಬೊಬ್ಬರು

ಮಗುಟವುಟ್ಟು ಶಲ್ಯಹೊದೆದು ಮುಡಿಗೆ ಗರಿಯನು ಸೆಕ್ಕಿಸಿ
ಕಣ್ಣುಮಾಡುವ ಮಧುರೆ ಹೆಂಗಳ ಸೆಡಕುನೋಟವ ಸೊಕ್ಕಿಸಿ—ಬನ್ನಿರೋ

ನಂದಗೋಕುಲಬಾಲರೇ ಇವರೆಲ್ಲರಾಡುವ ಧೀರರು
ಅಹುದಹುದು ಮತ್ತಾರು ಎನ್ನುವ ಠೀವಿಯೊಳು ನಾವೆಲ್ಲರು—ಬನ್ನಿರೋ

ತೋಳ ಬಂದಿಯು ಹೊನ್ನು ಮಿರುಗಲು ಜಟ್ಟಿಗಳ ನಗುವಂದದಿ
ಬೀಸಿ ನಡೆವ ದಿಟ್ಟರೇ ಸೈ ಎನ್ನೆ ಜನವಾನಂದದಿ—ಬನ್ನಿರೋ

ಬಲರಾಮ

ಅರರೆ ಏನಾಗಿಹುದೋ ಕೃಷ್ಣ ಆರು ಮಂಕನು ತಳಿದರೊ
ಹಣ್ಣಾ ಸಂಜೇರಿಹುದೆ ಮುರಳಿಯು ಸಾಕುಸಾಕಿನ್ನೇಳಲೋ—

ಗೋಪಾಲಕರು

ಏಳು ಕೃಷ್ಣ—ಏಳಿರೆಲ್ಲ—

ಕೃಷ್ಣ

ಏಕೆ ಏನಿದು ಗಡಿಬಿಡಿ
ಹೋಗುವೆಡೆ ಹೋಗಯ್ಯ ನನ್ನನು ನನ್ನ ಪಾಡಿಗೆಯೇ ಬಿಡಿ

ಬಲರಾಮ

‘ಬಿಲ್ಲ ಹಬ್ಬದೊಳು ಬೀರವ ತೋರಲು
ಬನ್ನಿರಿ ಗೋಕುಲವೀರರೇ’—
ಕಿವಿಗೊಡು ಅಹಹಾ ಎಂಥ ಕರೆ

ಬಿಲ್ಗಳ ಬಗ್ಗಿಸಿ ಮಲ್ಲರ ಜಗ್ಗಿಸಿ
ಮದ್ದಾನೆಯ ಮದ ಕುಗ್ಗಿಸಿ
ತೇಜವ ಮೆರೆಸಲು ಕರೆ ಬಂದಿದೆ ಬಾ
ಬಿನದದ ಬೆಸನವ ತಗ್ಗಿಸಿ

ಗೋಪಾಲಕರು

ಕೇಶಿಯ ಕೊಂದವನೇ
ನಾಗರ ಹೆಡೆಯೊಳು ನಿಂದವನೇ
ಹೆಬ್ಬಾವನೆ ಹೊಕ್ಕವನೇ
ಮಲೆಯನೆತ್ತಿ ಮುಗಿಲೊಡೆಯನ ನಕ್ಕವನೇ
ದೊರೆ ನಿನಗೆಂದೇ ಈ ಮುಖ್ಯನ ಕಳಿಸಿಹನೇ
ಎಲ್ಲರ ಮೀರುವ ಬೀರವ ತೋರಲು
ಹೊರಡೆಲೊ ಗೋಕುಲವೀರನೇ

ಕೃಷ್ಣ

ಕಂಸನಿಂದ ಆಹ್ವಾನ
ಎಂದು ಇಲ್ಲದೀ ಮಾನ
ಇದಕೇ ಇಷ್ಟು ಸುಮಾನ

ಹೊರನಾಡಿನ ಕರೆ ಕೇಡಿನ ಕರೆ—
ಅದು ತಾಯಿಯಂತೆ ಮೊಲೆಯನೂಡೆ ಬಂದಿತ್ತು
ಕುದುರೆಯಂತೆ ಕೆನೆದಾಡುತ ನಿಂದಿತ್ತು
ದಿನಬಳಕೆಯ ಗಾಳಿಯಂತೆ ಮೈಸೋಕಿ
ನಮ್ಮ ಕೊಲ್ಲಲೆತ್ತಿ ಬಿತ್ತು ಬಾನ್‌ತಾಕಿ
ತೆರೆತೆರ ಅರೆಅರೆಗೆರಗೆರಗಿ ಜೀಳ್ವಂತು
ಕೇಡು ಬಂದು ನಮ್ಮ ಸೋಕಿ ಸೋತಿತ್ತು
ಗೋಕುಲದ ತಾಯ್ನೆಲದ ಕಾಪಿರಲು
ಎಡರೆಲ್ಲ ಹುಡಿಹುಡಿಯಾಯ್ತು ಬಯಲು

ಮಧುರೆಯು ಕರೆ ಕೇಡಿನ ಕರೆ
ಅನಿವಾರ್ಯದೊಳದು ನಿಂತೆಡೆಗೇ ಬರೆ
ಸೆಣಸುವುದನಿವಾರ್ಯ
ಅದು ಕರೆವೆಡೆಗೋಗುಡುತಡಿಯಿಡೆ
ಅನುಚಿತವಾ ಕಾರ್ಯ

ಬಲರಾಮ

ಹಾಡುಕುಣಿತಗಳಿಂದ ಮೆದುವಾದೆಯೋ ಕೃಷ್ಣ
ಕೇಡು ಕೇಡೆಂದು ನೀ ಹೇಡಿಯಾದೆ
ಬಿಲ್ಲ ಹಬ್ಬಕೆ ಬನ್ನಿ ರೆಂದರಸು ಕರೆಕಳುಹೆ
ಒಲ್ಲೆನೆಂದೊಡೆ ಅದುವು ಎಂಥ ಮರ್ಯಾದೆ

ನೋಡು ನೋಡೀ ಮುಖ್ಯ ಕೇಡಿನಾಳಂತಿಹನೆ
ನೋಡಿದೊಡನೆಯೆ ನೇಹಕೆಡೆಯಾದೆ ನಾನು
ಅನ್ವರ್ಥನಾಮನೆನೆ ಅಕ್ರೂರನೀ ಸೌಮ್ಯ
ನಿನ್ನ ಬಹುಮಾನಿಸುತ ಇಲ್ಲಿ ಬಂದಿಹನು
ಆತಂಗೆ ಕಿವಿಗೊಡು
ಸಂದೆಗಂಗಳ ಬಿಡು

ಅಕ್ರೂರ

ಕೃಷ್ಣ ನಂದಗೋಪಕುಮಾರ ವೀರ
ಬಾ ಬಾ ಮಧುರೆಗೆ ಬಾ

(ಹಾಡುತ್ತಾನೆ.)

ಹಾಡು : ರಾಗ—ಹಿಂದುಸ್ತಾನಿ ಭೈರವಿ
ಗೋಕುಲ ಬಾಲಕ
ಸ್ವಜನ ಪಾಲಕ
ಬಾ ಬಾ ಮಧುರೆಗೆ ಬಾ

ಮುಗಿಲ ತೇರಂತೆ ಬಾ
ಮಿಂಚ ತೋರುತ್ತ ಬಾ
ಸೊದೆಯ ತರುವ ವಿನತಾಸುತನಂದದಿ—
ಬಾ ಬಾ ಮಧುರೆಗೆ ಬಾ

ಹಗಲ ರವಿಯಂತೆ ಬಾ
ಇರುಳ ಪೆರೆಯಂತೆ ಬಾ
ತೇಜಃಪೂರಕ ತಾರಕ ಬಾರೈ—
ಬಾ ಬಾ ಮಧುರೆಗೆ ಬಾ

ಬಾನ ಹೊಳೆಯಂತೆ ಬಾ
ಬನದ ನೆರೆಯಂತೆ ಬಾ
ಗೋಕುಲವುಳಿದೀ ಜಗಕ್ಕೆ ಬಾರೈ—
ಬಾ ಬಾ ಮಧುರೆಗೆ ಬಾ

ಎಲ್ಲ ಕಂಗಳನು ತುಂಬಲು ಬಾ
ಎಲ್ಲರಾಸೆಗಿಂಬಾಗಿ ಬಾ
ಎಲ್ಲರ ನಚ್ಚನು ಹೊತ್ತಿಸೆ ಬಾರೈ—
ಬಾ ಬಾ ಮಧುರೆಗೆ ಬಾ

ನಂದಕುಮಾರನೆ ಬಾ
ನಯನಮನೋಹರ ಬಾ
ಎಲ್ಲರು ಹೊಗಳುವ ವೀರನೆ ಬಾರೈ—
ಬಾ ಬಾ ಮಧುರೆಗೆ ಬಾ

ಬಲರಾಮ

ಮಂದಿಯ ಬಿನದದ ನಟನೇ ನೀನು
ಸನ್ನೆಗೆ ಹಾಡುವ ಗಾಯಕನೇನು
ಅರಸರಂತೆ ಬಾಳ್ಗೊಳ್ಳುವ ಬಾರೈ—
ಬಾ ಬಾ ಮಧುರೆಗೆ ಬಾ

ಹಳುವನುಳಿದು ಬಾ
ಕೊಳಲನೆಸೆದು ಬಾ
ಹೆಂಗಳ ಹಂಬಲ ತೊರೆಯುತ ಬಾರೈ—
ಬಾ ಬಾ ಮಧುರೆಗೆ ಬಾ

ನಿನ್ನ ಮನವುಳಿವ ಹಳೆಪೊರೆಯಂತೆ
ಹಳುವಿಗಾಗಲಿದು ಬಾ

ಹೊಸ ಮನದೊಳು ಬಾ
ಹೊಸ ಬಾಳಿಗೆ ಬಾ
ಜಸಕೇರಲು ಬಾ—
ಬಾ ಬಾ ಮಧುರೆಗೆ ಬಾ

(ನಡುವಿಗೆ ಕೃಷ್ಣನು ಸಿಕ್ಕಿಸಿಕೊಂಡಿರುವ ಕೊಳಲನ್ನು ಬಲರಾಮ ಕಿತ್ತೆಸೆಯಲು ಹೋಗ
ತ್ತಾನೆ. ಕೃಷ್ಣನು ತಡೆಯುತ್ತಾನೆ. ಆದರೆ ಕೊಳಲು ಇವರ ಸೆಣಸಾಟದಲ್ಲಿ ಕೆಳಗೆ ಬೀಳುತ್ತ
ಎಲ್ಲರೂ ಹಾ ರಾಮ ಹಾ ಕೃಷ್ಣ ಅಣ್ಣ ಅಣ್ಣ ಎಂದು ಉಗ್ಗಡಿಸುತ್ತಾರೆ.)

ಅಕ್ರೂರ

ಭಾವವಂಶವೇ ಕೊನೆಗಂಡಿತು ಎನೆ
ಘಾತವಾಯಿತೀ ವಂಶದ ಪಾತ

ಕೃಷ್ಣ

(ಬಿದ್ದ ಮುರಳಿಯನ್ನು ನಿರ್ವೇದದಿಂದ ನೋಡುತ್ತಾ)

ಏಕಿಂತು ಮುಳಿಸಾಂತೆ ಬಡ ಕೊಳಲ ಮೇಲೆ
ಕಲ್ಪಲತೆಗೈರಾವತಂ ಮುಳಿವವೋಲೆ
ಗೊಲ್ಲರಾವೆಮಗಿದುವೆ ತಕ್ಕ ಭೂಷಣವು—
ಜನ ನಗುವುದೆಂದೆಸೆಯೆ ಲೋಕದೂಷಣವು

ಬಲರಾಮ

ಶೂರರೆಂದಾಹ್ವಾನ ಗೊಲ್ಲರೆಂದಲ್ಲ
ಮಧುರೆಗಿದು ತರವಲ್ಲ ನಗುವರೆಂದಲ್ಲ
ಹಳ್ಳಿ ಹಳುವಿನ ಜಿನದಕೀ ಕೊಳಲು ಲೇಸು
ಹೊಳಲ ಬಲುಗದ್ದಲದೊಳಿದರ ಬೆಲೆಯೇಸು

ಕೃಷ್ಣ

(ಕೊಳಲ ಕಡೆ ನೋಡುತ್ತಾ, ಬಿಡುವ ನಿರ್ಧಾರಕ್ಕೆ ಮೊದಲು ಮೋಹವಾಂತು)

ನನ್ನಂಗವೊಂದ ನೀ ಚಿವ್ರಟಿ ತೆಗೆದಂದದೊಳು
ಕೊಳಲ ಕಿತ್ತೊಗೆದೆಯಣ್ಣಾ
ಇಂದುವರೆಗೆನಗಾದ ಸೊಗವೆಲ್ಲ ಬಾಳ್ಗೊಂಡು
ಗೋಳಿಡುವ ತೆರವಾಯ್ತು ಬನ್ನ
ನನ್ನಿರವಿನೊಂದಂಶ ನನ್ನುಳಿದು ಬಿದ್ದಿತಿಲ್ಲಿ
ಈ ಹಾನಿಗೆನ್ನ ಬಗೆ ನೆತ್ತರಿಡುತಿಹುದೊ ಇಲ್ಲಿ

ಬಲರಾಮ

ಇಂತೇತಕಳಲುತಿಹೆ ಮತ್ತೆ ಕೈಕೊಳ್ಳು
ಕಂಸಸಭೆಯನು ನಲಿಸಲಹುದಿದರ ಸೊಲ್ಲು—

ಕೃಷ್ಣ

(ಸ್ವಲ್ಪಹೊತ್ತು ಕೊಳಲನ್ನು ನಿಟ್ಟಿಸಿ, ಬಿಡುವ ನಿರ್ಧಾರಕ್ಕೆ ಬಂದು)

ಹೊಳಲಿಗೆ ಕೊಳಲಿದು ತರವಲ್ಲ
ಮಧುರೆಗಿದರ ಸವಿ ಸಲ್ಲ

ರಾಗ—ಮೋಹನ

ಹಳಿಯದಿರೈ ಜರೆಯದಿರೈ
ಮುರಳೀ ನೀನಿಲ್ಲೆ ಇರೈ
ನಾ ಬಹವರೆಗೂ ಇಲ್ಲೆ ಇರೈ
ಆ ಬನದೇವಿಯ ಕೈಯೊಳಿರೈ
ಬೃಂದಾವನ ನೀ ಸಂರಕ್ಷಿಸುತಿರು
ನನ್ನೀ ಮೋಹದ ಮುರಳಿಯನು
ಬನದೆಲರೇ ನೀ ಒಮ್ಮೆಗೆಯೊಮ್ಮೆಗೆ
ನುಡಿಸುತ್ತಿರು ಮೆಲ್ದನಿಗಳನು
ಹಕ್ಕಿಗಳೇ ನೀವಿದರಿಂಪಂ ಕೊಂಡಿರಿ
ಯಮುನೇ ನೀನಾಂತಿರು ಲಯವ
ಭಾವಂಗಳ ತೇಜಂಗಳ ಕೊಂಡಿರಿ
ಚಂದ್ರತಾರೆಗಳೆ ಇದರುಲಿವ
ಗೆಳತಿಯರೇ ನೀವಿದರೊಲವ
ನಡೆ ಅಣ್ಣಾ ನಡೆ ಮುರಳಿಯ ಬಿಟ್ಟೆ
ನಡೆಯಿರಿ ಮಧುರೆಗೆ—ಇನ್ನದ ಮುಟ್ಟೆ

ಹಾಡು : ರಾಗ—ಹಿಂದೋಳ

ಕೊಳಲು ಬನದೊಳಿರಲಿ—ನಾ
ಹೋಗಿಬರುವೆ ಮುರಲೀ || ಪ ||

ಬಹೆನೊ ಬಾರೆನೋ ಬಲ್ಲೆನೇ—ವಿಧಿ-
ಯಿತ್ತುದೊಲ್ಲೆನೆಂದೆಂಬೆನೇ

ಹಳುವೊ ಹೊಳಲೊ ಹರಿ ಕರೆವೆಡೆಗೋಗೊಡು-
ತಡಿ ಮುಂದಿಡದೆಯೆ ಹಿಂದೆಗೆವೆನೆ ನಾ—ಕೊಳಲು

ಮಿಕ್ಕ ಜಗಕಿದರ ಮಧುರ ಭಾವಗಳ್
ತಕ್ಕುವಲ್ಲವೇನೋ
ಅಹಂಮದವುಕ್ಕಿ ಸೊಕ್ಕಿ ನಡೆವರಿಗೆ
ಉಕ್ಕೆ ತಕ್ಕುದೇನೋ—ಕೊಳಲು

ಮನದ ರಥ ಮಧುರೆ ನೇರಕೆ
ಪಯಣ ಸಜ್ಜಾಗೆ ದೂರಕೆ
ಸಸಿಯದೀ ಬನ
ನೇಹದೀ ಜನ
ಬೇರೆ ಲೋಕದವರೋ
ಎಂದೆ ಕಾಣುತಿಹರೋ—ಕೊಳಲು

ಬಗೆಯ ಕಳವಳ ಎದೆಯು ತಳಮಳ
'ಮರಳಿ ಬಾರೆ' ಎನ್ನೆ
ಎಚ್ಚರಕ್ಕೆ ಬಹ ಕನಸಿನಂತಹಾ
ಇಂದೆ ಆಯ್ತು ನಿನ್ನೆ—ನಾ
ಹೋಗಿಬರುವೆನೆನ್ನೆ—ಕೊಳಲು

ಎನ್ನ ವಂಶವೇ ಆತ್ಮದಂಶವೇ
ನಿನ್ನ ಬನದಿ ಬಿಡುವೆ
ಆದೊಡೆದೆಯೊಳಿಡುವೆ
ನೆನೆವೆ ಹಕ್ಕಿ ಹಾಡೆ
ಇರುಳು ಚುಕ್ಕಿ ಸೂಡೆ
ಹೊಸಲು ದನಿಗೈಯೆ ಹಳುವು ಮರ್ಮರಿಸೆ
ಸುಗ್ಗಿ ಗಾಳಿಯಾಡೆ
ಏಕೊ ಹಿಗ್ಗು ಮೂಡೆ—ಕೊಳಲು

ಆಲದೆಲೆಯ ಮೇಲೆ
ಕೆಡೆವ ಹರಿಯು ಹೋಲೆ
ನನ್ನ ನೇಹ ಮುದ ಬಿಸದಗಳೆಲ್ಲವು
ನಿನ್ನಾ ಸರೆವಡೆದುಳಿವಂ ಕೊಳ್ಳಲಿ—ಕೊಳಲು

ಬಹೆನೊ ಬಾರೆನೋ ಅರಿಯೆ ನಾ—ನಿ-
ಮ್ಮೊಲುಮೆ ಬೆಂಬಳಿಯೊಳಿರುವೆ ನಾ
ಹೊಳಲೊ ಹಳುವೊ ಶಿವ ಕರೆವೆಡೆಗೋಗೊಡು-
ತಡಿ ಮುಂದಿಡುವೆನು ಹರಸಿ ಬೀಳ್ಕೊಡಿ—ಕೊಳಲು

(ಗಂಡುಹುಡುಗರೆಲ್ಲ 'ಬನ್ನಿರೋ' ಎಂದು ಮತ್ತೆ ಹಾಡುವುದಕ್ಕೆ ಪ್ರಾರಂಭಿಸುವಾಗ ಹೆಂಗೆಸರು ಕೃಷ್ಣನ ನಿರ್ಧಾರಕ್ಕೆ ಬೆಚ್ಚಿ ಓಡಿಬಂದು ಕೊಳಲನ್ನೆತ್ತಿಕೊಂಡು ಕೃಷ್ಣನನ್ನು ಅಡ್ಡಗಟ್ಟುತ್ತಾ ಹಾಡುತ್ತಾರೆ.)

## ಗೋಪಿಯರು

ಹಾಡು : ರಾಗ—ಆಭೇರಿ

ಪೋಗದಿರೈ ಪೋಗದಿರೈ ಪೋಗದಿರಯ್ಯಾ || ಪ ||
ಮಾರಸುಂದರ ಗಿರಿಧರ ನೀ ಪೋಗದಿರಯ್ಯಾ || ಅ. ಪ ||

ನಮ್ಮೊಲವಿನ ಪ್ರಾಣ ನೀ ನಮ್ಮನುಳಿವೆಯಾ
ನಮ್ಮ ಭವದ ತ್ರಾಣ ನೀ ನಮ್ಮ ತೊರೆವೆಯಾ
ಮೀನನುಳಿವ ನೀರಿನಂತೆ
ತಿರೆಯು ತೊರೆವ ಗಾಳಿಯಂತೆ ಪೋಗದಿರಯ್ಯಾ—ಪೋಗದಿರೈ

ಮನವೆ ಇಲ್ಲದೊಲವಿನಂತೆ ಹರಿದು ಪೋಪೆಯಾ
ನೇಹವಿರದ ಮೋಹದಂತೆ ಮರೆದು ಪೋಪೆಯಾ
ಬಾಳ ಗುಡಿಯು ಪಾಳುಗೆಡವಿ
ಬೆಳೆಯು ಬಿಡುತ ಮುಳ್ಳಿನಡವಿ ಪೋಗದಿರಯ್ಯಾ
ಮನಮೋಹನ ಗೋಪಾಲ ಪೋಗದಿರಯ್ಯಾ—ಪೋಗದಿರೈ

ಹೊಳೆ ಬನ ಹೂ ಹಕ್ಕಿ ಸೊಬಗ ಟೊಳ್ಳುಗೈವೆಯಾ
ಬೆಳುದಿಂಗಳ ಸೊಗವ ನೀನು ಸೊನ್ನೆಗೈವೆಯಾ
ನಮಗೆ ನಾವೆ ಸೇರದಂತೆ
ಬೇಸರ ನಮ್ಮಾಳುವಂತೆ ಪೋಗದಿರಯ್ಯಾ—ಪೋಗದಿರೈ

ಮಧುರೆ ಹೆಣ್ಣ ಬೇಟವುಳಿದು ಮರಳಿಬರುವೆಯಾ
ನಲುಮೆಕೂಟ ಕುಣಿತಗಳಲಿ ನಮ್ಮನರಿವೆಯಾ
ಸೊಗದ ಬಾಯ ತೆರೆದು ಹೊಳಲು
ನುಂಗಿಕೊಳುವುದಜಗರದೊಲು ಪೋಗದಿರಯ್ಯಾ—ಪೋಗದಿರೈ

ಮುರಳಿಯೆಸೆದು ಪೋಪ ನೀನು ಮರಳಿ ಬರುವೆಯಾ
ಸರವ ನುಡಿಸಿ ನಮ್ಮಾಸೆಯ ತೊಳೆಯ ಬರುವೆಯಾ
ಅಡವನಿಟ್ಟ ಹಳೆಯೊಡವೆಯ
ಮರೆಯುವುದೇ ಸಾಜವಯ್ಯ ಪೋಗದಿರಯ್ಯಾ—ಪೋಗದಿರೈ

ನಮ್ಮ ನುಳಿದು ಪೋಗೆ ನೀನು ಆರು ಕಾವರು
ಧನ್ಯರೆನ್ನೆ ನಿನ್ನ ತೆರದೊಳಾರು ಓವರು
ಗೋಪ ಕೃಷ್ಣ ಓಪ ಕೃಷ್ಣ
ಅಣ್ಣ ಕೃಷ್ಣ ತಂದೆ ಕೃಷ್ಣ—ಪೋಗದಿರಯ್ಯಾ
ಪೋಗದಿರೈ ಪೋಗದಿರೈ ಪೋಗದಿರಯ್ಯಾ
ಮನಮೋಹನ ಮಾರಸುಂದರ ಪೋಗದಿರಯ್ಯಾ

ಬಲರಾಮ

ಏತಕಿಂತು ಹಲುಬುತಿಹಿರಿ ಮರಳಿ ಬಾರೆವೆ
ಎರಡೆ ದಿನಕೆ ಮಧುರೆ ಬಿಟ್ಟು ಬನದಿ ಸೇರೆವೆ
ಇನ್ನು ಬಯಲುಭಯುವ ಬಿಡಿರಿ
ಹರಕೆಯಿಂದ ಬೀಳುಕೊಡಿರಿ ಹೊಳಲ ಪಯಣಕೆ
ಬನ್ನಿ ಬನ್ನಿ ಸಡಗರಗೊಳಿ ಹೊಳಲ ಪಯಣಕೆ

ಕೃಷ್ಣ

ನಂಬುಗೆಯಿಂ ಬೀಳುಕೊಡಿರಿ ಮರಳಿ ಬರುವೆನು
ನ್ಯಾಸವಿಟ್ಟ ಮುರಳಿಯಾಣೆ ಮರಳಿ ಬರುವೆನು
ಗೋಕುಲವನು ತೊರೆವೆನೇ
ನಿಮ್ಮೊಲವನು ಮರೆವೆನೇ
ಮರಳಿ ಬರುವೆ ಮರಳಿ ಬರುವೆ ಮರಳಿ ಬರುವೆನು
ಮುರಳಿಯ ಕೈಕೊಳ್ಳುವಂದು ಮರಳಿಬರುವೆನು

ಗೋಪಿಯರು

ಕೊಳಲ ತೊರೆದು ಪೋಪ ನೀನು ಮತ್ತೆ ಬರುವೆಯಾ
ಮುಟ್ಟೆನೆಂದು ಆಣೆಯಿಟ್ಟು ಮತ್ತೆ ಬರುವೆಯಾ
ನುಡಿಯೊ ಆಣೆ ಬಿಟ್ಟೆತೆಂದು—
ಕೊಳಲ ಕೋ ನುಡಿಸು ಇಂದು
ಒಂದೆ ಬಾರಿ ನುಡಿಸು ಕೃಷ್ಣ ಅಭಯಗೀತವ

ಎಲ್ಲರೂ

ಒಂದೆ ಬಾರಿ ನುಡಿಸು ಕೃಷ್ಣ ಅಭಯಗೀತವ

ಬಲರಾಮ

ಅದರ ದನಿಯು ಕೇಳಲೆನಗು ಆಸೆಯಾಯಿತೊ
ಬರಿದೆ ಜರೆದು ದುಡುಕಿದೆನ್ನೈ ಸರವ ಬಾರಿಸೊ

ಅಕ್ರೂರ

ಕೊಳ್ಳು ಕೃಷ್ಣ ಕೊಳ್ಳು ಕೃಷ್ಣ ಮತ್ತೆ ಮುರಳಿಯ
ಕೊಂಡು ನೀನು ನುಡಿಸು ಕೃಷ್ಣ ಅಭಯಗೀತವ

(ಗೋಪಿಯರು ಕೊಳಲನ್ನು ಕೃಷ್ಣನ ಕೈಗೆ ಕೊಡುತ್ತಾರೆ.)

ಕೃಷ್ಣ

ಎಲೆ ಕೊಳಲೆ—ಮರಳಿ ಹಸೆನಿಂದಂತೆ ಕೈಗೆ ಬಂದೆ
ನಿನ್ನ ಮೋಹಕೆ ನಾನು ಮತ್ತೆ ಸಂದೆ

(ತುಟಿಗೆತ್ತಿ ನುಡಿಸುವನು. ಗೀತ ಎಲ್ಲರಿಗೂ ಹಿತವಾಗುತ್ತದೆ. ಅವರವರ ಭಾವಕ್ಕೆ ತಕ್ಕಂತೆ ಅರ್ಥ ಹೀಗಿರಬಹುದು. ಈ ಹಾಡನ್ನೆಲ್ಲವನ್ನೂ ಮೇಳದವರು ಹಾಡುತ್ತಾರೆ. ಸಂದರ್ಭಾನುಸಾರವಾಗಿ, ಮುಂದೆ ಸೂಚಿಸಿರುವಂತೆ ಆಯಾ ಪಾತ್ರಗಳು ಇವರೊಂದಿಗೆ ಕೂಡಿ ಹೇಳುತ್ತಾರೆ.)

ಮೇಳದವರು

ಹಾಡು : ರಾಗ—ಶಂಕರಾಭರಣ

ಅಲ್ಲಿರಲಿ ಇಲ್ಲಿರಲಿ ಎಲ್ಲಿರಲಿ ನಾವೆಂತಿರಲಿ
ಎಂಥದೋ ಭಯ—ಸಮ-
ಗಾವುದೋ ಭಯ

ಬಂಡೆಯಂತಿರೆ ಎದೆ
ಹುರುಪುಗೊಂಡಿರೆ ತನು
ತಿಣ್ಣವಾಗಿರೆ ಮನ
ಬೆನ್ನ ಹಿಂದಿರೆ ದೈವ—ಎಂಥದೋ ಭಯ

ಬಲರಾಮ

ತುರುಗೊರಸಲ್ಲ ಹುಲಿಯುಗುರು
ಅಣುವಾದರು ಸಿಂಗದ ನವಿರು

ದೈವದ ಮೈಗಂಟಿಹೆವಿಂತು
ಮುಟ್ಟಬಲ್ಲವರಾರೆಂತು—ಎಂಥದೋ ಭಯ

ಗೋಪಾಲಕರು

ನಾವು ನೊಂದರೆ ನೋವವಗೆ
ಅವನ ಸಿಟ್ಟಿಗಿದಿರಾವ ಹಗೆ
ಆತನೆ ಬೀಸುವ ಕೈದುಗಳು
ನಾವವನರ್ತಿಯ ಹೃದಗಳು—ಎಂಥದೋ ಭಯ

ಅಕ್ರೂರ

ನಡೆವೆಡೆಯೆಲ್ಲಾ ತಿರೆಯೊಬ್ಬಳೆ ಇಹಳೈ
ಪೋಪೆಡೆಯೆಲ್ಲಾ ರವಿಯೊಬ್ಬನೆ ಬಹನೈ
ಇರುವೆಡೆಯೆಲ್ಲಾ ಎಲರೊಬ್ಬನೆ ಉಸಿರು
ಅರಿವೆಡೆಯೆಲ್ಲಾ ಶಿವವೊಂದೇ ಬಸಿರು
ಆತನಿಂತಾತಿರೆ ಕಾತರಂಗಳೇತಕೆ
ಭೀತಿವೀತರಾವು ನಮಗೇತರಿಂ ಭಯ

(ಆದರೆ ಗೋಪಿಯರಿಗೆ ಮಾತ್ರ ಶೋಕ ದಾರುಣವಾಗಿ ಈ ತೆರ ಅರ್ಥವಾಗುತ್ತದೆ.)

ಗೋಪಿಯರು

ಹೂಗಳಂತೆ ಬಣ್ಣಬಣ್ಣ ಕಂಪುಕಂಪೆದೆಎದೆ
ಒಲುಮೆ ಸುಗ್ಗಿ ತರುವ ಹಿಗ್ಗಿನಿಂದ ಹೊಮ್ಮಿಕಮ್ಮಿದೆ
ಹಾ ಒಲವೇ ತಂದಿತೊಲವೇ ಕೊಂಡಿತೊಲವೇ ಸೂಡಿ ಬಿಸುಟಿತು
ಮರಳ್ವೆನೆಂದು ಮರಳ್ವೆನೆಂದು ಬರಿಯ ನೆಚ್ಚುಗೊಟ್ಟಿತು
ಏನ ಗೈವೆವೇ ನಾವೇನ ಗೈವೆವೇ
ಭೀತಿಯೆಂದರೇನೊ ಎಂತೊ ನಾವು ಬಲ್ಲೆವೇ
ಶೋಕದಿಂದ ಭೀತಿವೀತರಾದೆವಲ್ಲವೇ
ಆರ್ತರಲ್ಲವೇ ನಾವಾರ್ತರಲ್ಲವೇ—ನಮಗಾವುದೇ ಭಯ
ಅಲ್ಲಿರಲಿ ಇಲ್ಲಿರಲಿ ಎಲ್ಲಿರಲಿ ನಾವೆಂತಿರಲಿ ನಮಗೇತರಿಂ ಭಯ

ಶೂನ್ಯವಾಗಿರೆ ಎದೆ
ಶೋಕವಾಂತಿರೆ ಮನ

ತಾಪಗೊಂಡಿರೆ ತನು
ನೆನೆವೆ ಹಿಂದಿರೆ ನೀನು—ಆವುದೋ ಭಯ

(ಹೀಗೆ ವಿಧವಿಧವಾದ ಗತಿಯಲ್ಲಿ ಧೀರ ಶಂಕರಾಭರಣದಲ್ಲಿ ವಾದ್ಯಮೇಳ ಸಾಗಿ ನಿಲ್ಲುತ್ತದೆ. ಕೃಷ್ಣ ಮಂದಸ್ಮಿತದಿಂದ ಕೊಳಲನ್ನು ಗೋಪಿಯರ ಕೈಗೆ ಕೊಡುತ್ತಾನೆ.)

ಕೃಷ್ಣ

ಇನ್ನು ಹಂಬಲವನು ಬಿಡಿ
ಹರಕೆಯಿಂದ ಬೀಳುಕೊಡಿ

(ಗೋಪಿಯರು ವಿಷಣ್ಣರಾಗಿಯೇ ಹರಸಿ ಬೀಳುಕೊಡುತ್ತಾರೆ.)

ಗೋಪಿಯರು

ಹಾಡು : ರಾಗ—ಸೌರಾಷ್ಟ್ರ

ಬಾಳು ಬಾಳು ನೀ ಮುರಳೀಧರ ಮನಮೋಹನ ಗಿರಿಧರನೇ
ಗೆಲ್ಲು ಗೆಲ್ಲು ಜಸಬೆಳಕು ಚೆಲ್ಲು ನೀ ಗೋಪೀಜನವರನೇ

ಲೋಕಕೆ ಬೆಳೆವನ ಗೋಪೀಜನಮನ
ಒಳಕೊಳ್ಳಲುಬಹುದೇ
ಕೊಡದೊಳಡಗು ಬಾ ಎಂದೀ ಯಮುನೆಯ-
ನೆರೆವೊಡೆ ಸಲ್ಲುವುದೇ
ಹರಿಯೋ—ಗಂಗೆಯಂತೆ ಹರಿಯೋ
ಎಲ್ಲ ಬಾಳು ನಿನ್ನಾತ್ಮರಸದಿ ಹಸನಾಗೆ ನೀನು ಹರಿಯೋ
ಬಾಳು ಬಾಳು ನೀ ಮುರಳೀಧರ—ಮನ-
ಮೋಹನ ಗಿರಿಧರನೇ—

ತೆರೆತೆರೆಯೊಳಗೂ ಪರಿಪೂರ್ಣತೆಯೊಳು
ಬಾನ ಹಿರಿಯ ರವಿ ಹೊಳೆವಂತೆ
ಎಲ್ಲಿದ್ದರು ಹರಿ ನಮ್ಮೊಲವಿಗು ಬಾ
ಸಕಲ ಕಳೆಯಿಂದಲೆಸೆವಂತೆ
ಬೆಳಗೋ—ಸೂರ್ಯನಂತೆ ಬೆಳಗೋ
ನಿನ್ನ ಬೆಳಕು ಬೆಳುದಿಂಗಳಾಗಿ ಬರಲೆಮ್ಮ ನೀನು ಬೆಳಗೋ—
ಬಾಳು ಬಾಳು ನೀ ಮುರಳೀಧರ—ಮನ-
ಮೋಹನ ಗಿರಿಧರನೇ

ಗೆಲ್ಲು ಗೆಲ್ಲು ಜಸ ಬೆಳಕು ಚೆಲ್ಲು ನೀ
ಬೃಂದಾವನಚರನೇ
ಲೋಕಮನೋಹರನೇ—

(ಈ ಗೀತ ಮುಗಿಯುವ ವೇಳೆಗೆ ವಾದ್ಯಮೇಳ ಗೆಲವಿನ ರಾಗಕ್ಕೆ ತಿರುಗಿ 'ಬನ್ನಿರೋ ನಾವೆಲ್ಲ' ಎಂಬ ಹಾಡು ಎಲ್ಲ ಗಂಡಸರ ಬಾಯಲ್ಲೂ ಮೊಳಗಿಡಲು ಗುಂಪು ಮೆಲ್ಲನೆ ಮರೆಯಾಗುತ್ತದೆ. ಕೃಷ್ಣ ಮಾತ್ರ ಕೊನೆಯ ನಿರ್ವೇದದ ನೋಟವನ್ನು ಗೋಪಿಯರ ಮೇಲೂ ಕೊಳಲ ಮೇಲೂ ಚೆಲ್ಲಿ ಮರೆಯಾಗುತ್ತಾನೆ. ವನ ಕ್ರಮೇಣ ಸಂಗೀತಶೂನ್ಯವಾಗುತ್ತದೆ. ಗೋಪಿಯರೂ ಶೋಕದಿಂದ ಮೂಕರಾಗಿದ್ದಾರೆ. ಆ ವೇಳೆಗೆ ರಾಧೆ ಮತ್ತು ನಾಗವೇಣಿ ಆತುರದಿಂದ ಬರುತ್ತಾರೆ.)

ಗೋಪಿಯರು

(ರಾಧೆಯನ್ನು ನೋಡಿ ಚೇತರಿಸಿಕೊಂಡು)

ಓ ಗೆಳತಿ ರಾಧೇ
ಓ ಗೆಳತಿ ರಾಧೇ
ಎಲ್ಲಿದ್ದೆಯೇ
ನೀನದೆಲ್ಲಿದ್ದೆಯೇ

(ಎಂದು ಅವಳನ್ನು ಸುತ್ತಿಕೊಂಡು ಕೊರಳ ಮೇಲೆ ಕೈಹಾಕಿಕೊಂಡು ಶೋಕವನ್ನು ವ್ಯಕ್ತಗೊಳಿಸುತ್ತಾ ಹಾಡುತ್ತಾರೆ.)

ಹಾಡು : ರಾಗ—ಶಂಕರಿ

ಕೊಳಲ ತೊರೆದು ಹೋದ—ರಾಧೇ
ಮುರಳೀಧರ ಗೋಪಾಲಕೃಷ್ಣ || ಪ ||
ಎಲ್ಲಿ ಇದ್ದೆಯೇ
ಎತ್ತ ಪೋದೆಯೇ
ಸಮಯದಿ ಕೃಷ್ಣನ ತಡೆಯದೆ ರಾಧೇ ||ಅ. ಪ ||

ಕ್ರೂರ ಅಕ್ರೂರ ಮಧುರೆಗೆ ಕರೆಯೆ
ಈ ಸವ ಸಾಕಾಯ್ತೆಮ್ಮನು ತೊರೆಯೆ
ಮರಳುವನೋ ಹಿಂದುಳಿಯುವನೋ ಸಖಿ
ಆತನ ಮರ್ಮವನಾರು ಬಲ್ಲರೇ—ಕೊಳಲ ತೊರೆದು

ಹೂಹೂಗಲೆಯುವ ದುಂಬಿಯು ಚೆಂದದೆ
ಕಂಗಳ ಮುಟ್ಟುತಲರೆಚಣ ತಳುಗದೆ
ಒಲಿದವರಿಗಿರುವ ನಾಚಿಕೆಯಿಂದಲಿ
ಸನ್ನೆಯೊಳಗೆ ನೀ ಎಲ್ಲೌ ಎನ್ನುತ—ಕೊಳಲ ತೊರೆದು

ಕಮಲವ ತೋರದ ಕೆಸರಿನ ಕೆರೆಯು
ಬಯಸದಾನೆಯೊಲು ನಡೆದನು ಇನಿಯ
ನಿನ್ನದುಳಿದು ಮಿಕ್ಕೊಲುಮೆಗೆ ದಕ್ಕನು
ಪೋ ರಾಧೇ ಬೇಗ ಪೋ ರಾಧೇ
ಪೋ ರಾಧೇ ಬೇಗ ಪೋ ರಾಧೇ
ಕೃಷ್ಣನೆರೆಯೆ ಪೋ ಪಯಣವ ನಿಲ್ಲಿಸೆ—ಕೊಳಲ ತೊರೆದು

ರಾಧೆ

ಹಾಡು : ರಾಗ—ಸೋಹಾನಿ

ಹಾ ಹೊರಟನೇ—ಪಯಣ ಹೊರಟನೇ
ಹಾ ತೊರೆದನೇ—ಕೊಳಲ ತೊರೆದನೇ
ನೆನೆದನೇ—ಎನ್ನ ನೆನೆದನೇ
ಮರಳನೇ ಇನ್ನು ಮರಳನೇ
ಏನುಗೈವೆ ನಾನೇನುಗೈಯಲೇ
ಪೇಳಿರಿ ಸಖಿಯರೆ ಪೇಳಿ ಸಖಿಯರೇ—
ಕೊಳಲ ತೊರೆದು ಪೋದ—ಗೆಳತೀ
ಮನಮೋಹನ ಗೋಪಾಲಕೃಷ್ಣ

ಒಲಿವೊಡೆ ಒಲಿದೇ ಒಲಿವನವ
ಉಳಿವೊಡೆ ಉಳಿದೇ ಉಳಿವನವ
ತೊರೆವೊಡೆ ತೊರೆದೇ ತೊರೆವನವ
ಮರೆವೊಡೆ ಮರೆತೇ ಮರೆವನವ
ಅಂಥರಿಲ್ಲ ಪುರುಷೋತ್ತಮನವನು—ಕೊಳಲ ತೊರೆದು

ಎರೆಯೆ ನಿಲುವನೇ ಹಾ
ಬರಿ ಸವಿಯ ನುಡಿಯನೇ ಹಾ

ಮರುಳೆ ಮರುಳೆ ಪೋ ಮರಳುವೆನೆನ್ನುತ
ಮರುಳ ನುಡಿದು ಹೊರಹೊರಡುವನಲ್ಲದೆ—ಕೊಳಲ ತೊರೆದು

ಬಳಿಗೆ ಪೋಪೆನೆಂತು—ಹಿರಿಯರ
ನಡುವೆ ಸುಳಿವೆನೆಂತು
ಸುಡುಸುಡೆನ್ನ ಭಯನಾಚಿಕೆಗಳ ಸಖಿ
ಕೊನೆಕಣ್ ಸೋಕಿಗು ಹೊರಗಾದೆನೆ ನಾ—ಕೊಳಲ ತೊರೆದು

ಸಖಿಯರು

ಕೊಳಲ ಕೊಳ್ಳು ಸಖಿ
ಕೊಳಲ ಕೊಳ್ಳು ಸಖಿ
ಅಳಲ ತಾಳಿಕೊಳ್ಳೆ
ಬೆಚ್ಚಗಿಹುದಿನ್ನು ತುಟಿಯ ಸೋಂಕಿಂದ
ಪ್ರಾಣರಸದಿಂದ ಕೊಳ್ಳೆ

(ರಾಧೆ ಕೈಕೊಂಡು ಮೋಹವಾಂತು ಹಾಡುತ್ತಾಳೆ.)

ರಾಧೆ

ಹಾಡು : ರಾಗ—ನೀಲಾಂಬರಿ

ಯಮುನೆಯ ಬನದೊಳು ಮೊದಲೊಲುಮೆಗುಟ್ಟಿನ
ಮಾತನ್ನು ಕಿವಿಯೊಳಗುಸುರಿದ ಕೊಳಲೇ
ದಿನದಿನದ ರೂಢಿಯ ಮೊಟ್ಟೆಯನೊಡೆದೆದೆ-
ಹಕ್ಕಿ ರೆಕ್ಕೆಯಿಡಕಲಿಸಿದ ಕೊಳಲೇ

ಮನದೊಳಗಾಸೆಯ ಪಂಜನು ಹೊತ್ತಿಸಿ
ಮನದನ್ನನಿವನೆಂದು ತೋರಿದ ಕೊಳಲೇ
ಜತೆಗೂಡುವೊಂದರೆಚಣಕಪ್ಪ ಮೋದದ
ತೇಜದಿ ಭವಕೆಲ್ಲ ಮೆರುಗಿಟ್ಟ ಕೊಳಲೇ

ಹೊಳೆ ನಿಂತು ಮಲೆ ತೂಗಿ ಬಾನ್ ಬಾಗಿ ತರು ತುರು
ಜನ ಸ್ತಬ್ಧರಾಗುತ್ತ ಕೇಳಿದ ಕೊಳಲೇ
ಸಲವು ಮತ್ತೇರಿಸಿ ಗುರುಲಘುವೆನ್ನದೆ
ಜಗವೆಲ್ಲ ಕುಣಿಸಿದ ಬಲುಮೆಯ ಕೊಳಲೇ

ಕೃಷ್ಣನ ಉಸಿರಿಲ್ಲದಿಂತು ನೀ ಬಿದಿರಾಗಿ
ಹೆಂಗಳ ಸುಯ್ಯುಲೊಳೊಣಗುವ ಕೊಳಲೇ
ಅಮೃತವ ಚೆಲ್ಲಿದ ಬರಿಕಳಶದಂದದಿ
ಮಹಿಮೆಯುಸಳಿಯುತ ಹಗುರಾದ ಕೊಳಲೇ

ಅವನುಳಿಯೆ ಬರಿದಾದ ಬೃಂದಾವನದಂತೆ
ನನ್ನಂತೆ—ನಿಮ್ಮಂತೆ—ನೀನಾದೆ ಕೊಳಲೇ
ಸಮದುಃಖದೊಳು ನಾವು ಗೆಳತಿಯರಾದೆವು
ವಿರಹವ ಮೌನದಿ ಮೊಳಗಿಡು ಕೊಳಲೇ

ಇದ್ದುದು ದಿಟ ಅವನೊಲಿದುದು ದಿಟ ನಾವು
ನಲಿದುದು ದಿಟ ಬಹ ನೆಚ್ಚು ದಿಟ
ಎಂದು ನೀನಾಗಾಗ ಗಾಳಿಯೊಳುಸಿರಾಡಿ
ನಮ್ಮೆದೆಗೆಚ್ಚರ ತರುತಿರು ಕೊಳಲೇ

(ದೂರದಲ್ಲಿ 'ರಾಧೇ ನಾಗವೇಣೀ' ಎಂದೂ, 'ಶುಕವಾಣೀ ಹರಿಣಾಕ್ಷೀ' ಎಂದೂ ಭಯವನ್ನು ಬೀರಿ ಭವವು ಬಂದು ಕವಿದುಕೊಳ್ಳುವ ಪರಿಯನ್ನು ತೋರುವ ನೀತಿಭೀತರಾದ ಬಂಧುಗಳ ಶಬ್ದವು ಕೇಳಿಬರುತ್ತದೆ. ರಾಧೆ ಬೆಚ್ಚಿ ಏಳುತ್ತಾಳೆ. ಕೊಳಲನ್ನು ಏನುಮಾಡ ಬೇಕೆಂದು ಆರಿಗೂ ತೋಚದು. ಅವಳಿಂದ ನಾಗವೇಣಿಯ ಕೈಗೆ ನಾಗವೇಣಿಯಿಂದ ಶುಕವಾಣಿಯ ಕೈಗೆ—ಹೀಗೆ ಅದು ಕೈಯಿಂದ ಕೈಗೆ ಸಾಗುತ್ತದೆ. ಕೊನೆಗೆ ಇದು ಎಲ್ಲರ ನ್ಯಾಸವಾಗಿ ಇಲ್ಲೇ ಇರಲೆಂದು ಮರದ ಬುಡದಲ್ಲಿ ಗರಿಕೆ ಬೆಳೆಯುತ್ತಿರುವ ತಾಣದಲ್ಲಿ ಸಖಿಯೊಬ್ಬಳು ಮರೆಸಿಡುತ್ತಾಳೆ. ಇವರು ಹೀಗೆ ಮಾಡುತ್ತಿರುವಾಗ ಸಂಬೋಧನೆಗಳು ಆಗಾಗ ಹತ್ತಿರಬರುವಂತೆ ಕೇಳಿ ಬರುತ್ತಿರುತ್ತದೆ.)

ನಾಗವೇಣಿ

ಎಂತೊರೆದರೇನಮ್ಮ ಹೆಣ್ಣಳಲಿಗೆಣೆಯುಂಟೆ
ಪೋಪೆವು ಮುರಳಿ ನೀನಿಲ್ಲೆ ಇರೌ
ಬೃಂದಾವನದೇವಿ ಸೆರಗಿನ ಹುಲ್ಲೊಳು
ನಮ್ಮೊಲುಮೆ ನಚ್ಚಾಗಿ ಇಲ್ಲೆ ಇರೌ

(ಸುಯ್ಯುತ್ತಾ ಎಲ್ಲರೂ ಚೆದರುತ್ತಾರೆ. ಸ್ವಲ್ಪ ಹೊತ್ತಾದಮೇಲೆ ಸುದಾಸ ಸುಬಲರೂ ಮತ್ತೆ ಕೆಲವು ಪೌರವೃದ್ಧರೂ ಬಂದು ಸ್ವಲ್ಪಹೊತ್ತು ಅತ್ತ ಇತ್ತ ನೋಡಿ ಮೌನವಾಗಿ ಹೊರಟು ಹೋಗುತ್ತಾರೆ. ರಂಗ ಎರಡು ನಿಮಿಷ ಶೂನ್ಯವಾಗಿ ಸಾವಿರ ವರುಷಗಳು ಕಳೆದ ಕಾಲವನ್ನು ಸೂಚಿಸುತ್ತದೆ. ಆಮೇಲೆ ಹರುಕು ಬಟ್ಟೆಯನ್ನುಟ್ಟ ಗೊಲ್ಲ ಹುಡುಗನೊಬ್ಬನು ರಂಗಕ್ಕೆ ಬಂದು ಮರದ ಬುಡದಿಂದ ಕೊಳಲನ್ನು ತೆಗೆದು ಸ್ವರವನ್ನು ಮೊದಲು ಕೇಳಿಬಂದಂತೆ ನುಡಿಸುತ್ತಿರುತ್ತಾನೆ.

ತೆರೆ ಬೀಳುತ್ತದೆ. ಬಳಿಕ ಕವಿ ಪ್ರವೇಶಿಸುತ್ತಾನೆ. ಕವಿಗೆ ಕನಸು ಹರಿದಿರುತ್ತದೆ. ಹೃದಯದ ಭಾವದಾವೇಗಗಳು ಶಾಂತವಾಗುತ್ತಿವೆ. ಈಗ ಗೊಲ್ಲ ಹುಡುಗನ ಕೊಳಲಿನಲ್ಲಿ ಅಷ್ಟು ಮಧುರ ಭಾವಗಳನ್ನು ಆತ ಕಾಣಲಾರ. ವಿಮರ್ಶೆಗೆ ಅದು ಪಾತ್ರವಾಗುತ್ತದೆ.)

ಕವಿ

ಅವನೀ ಮಾಯಾವಿ ಇಂತು ನಮರಾತ್ರಿಯೊಳು
ಕೊಳಲ ಬಾರಿಸುತಿರುಳ ಮೌನವನು ವ್ಯಥಿಪನಿಂತೆ
ಬೆಳಕಿರುಳ ಮುದ್ದಿಸಿದೆ ಜಗ ಸೊಗದಿ ನಿದ್ದಿಸಿದೆ
ಗಾಳಿ ಬಾಂದೊಟ್ಟಿಲೊಳು ಪವಡಿಸಿದೆ ಹಸುಳೆಯಂತೆ

(ಒಳಮನೆಗೆ ಹೋಗುತ್ತಾ)

ಅಹಹ ಈ ಕೊಳಲುಲಿವೊಳಾವ ನನಸಿದ್ದಿತೋ
ನನ್ನ ಬಗೆಯೊಳು ಬಿದ್ದು ಎಂಥ ಕನಸಾಯಿತಿದುವು
ಈ ಕನಸು ಬಿತ್ತಾಗಿ ಅವೆಡೆಗೆ ತೂರುತ್ತ-
ಲೇನಹುದೋ—ಅಂತು ಬಲು ಹಿರಿದಾಯ್ತು ಸಮ್ಮೋದವು

(ತೆರೆ.)

ಎರಕೆ

ನೀನಂದು ಗೋಕುಲದಿ ಕೊಳಲ ಬಿಸುಟಂದದೊಳು
ಭಾರತದ ಬಾಳ್ವೆ ಇರಲಿಂದು ರಸಬತ್ತಿ
ಮರಳಿ ಬಹೆಯಾ ಕೊಳಲ ತುಟಿಗೆ ತಹೆಯಾ ಎಂಬ
ಹಂಬಲದೊಳಾವಗಂ ನಿಲೆ ಚಿತ್ತವೃತ್ತಿ
ಪುರುಷೋತ್ತಮಾ ನಿನ್ನನಿಂತು ಹಾಡಿದೆನಯ್ಯ
ಗೊಲ್ಲತಿಯ ಭಾವದಿಂ ನೆನೆದು ಮೋಹದೊಳು
ಮನದ ಸೋಂಕಿಂದಾವ ಕುಂದಾಯ್ತೊ ಭವ್ಯತೆಗೆ
ಬುಧರೆನ್ನ ಮನ್ನಿಸಲಿ ನುಡಿಯ ನೇಹದೊಳು



# ಈ ಲೇಖಕರ ಇತರ ಕೃತಿಗಳು

---

## ಕವನಸಂಗ್ರಹಗಳು

ಹಣತೆ

ಮಾಂದಳಿರು

ಶಾರದ ಯಾಮಿನಿ

---

## ಗೀತ ರೂಪಕಗಳು

ಅಹಲ್ಯೆ

ದ್ರೋಣಿಯ ಬಿನದ ಮತ್ತು ಕವಿ

---

## ಗದ್ಯ ಚಿತ್ರಗಳು

ರಾಮಾಚಾರಿಯ ನೆನಪು

ರಥಸಪ್ತಮಿ ಮತ್ತು ಇತರ ಚಿತ್ರಗಳು

ದೊರೆಯುವ ಸ್ಥಳ:

ಕಾವ್ಯಾಲಯ * ಪ್ರಕಾಶಕರು * ಮೈಸೂರು